# ಬಿಂದುವಾಸಿನಿಯ ಮಗ

[ ದಿವಂಗತ ಶರತ್‌ಬಾಬುಗಳ ಪುಟ್ಟ ಕಾದಂಬರಿ ]

ಅನುವಾದಕರು :

ಶ್ರೀ ಗುರುನಾಥ ಜೋಶಿ, ಬಿ.ಎ. (ಕಾಶೀ ವಿದ್ಯಾಪೀಠ)

ಕುಮಾರಿ ಎಂ. ಎ. ಕುಪ್ಪಮ್ಮ, ವಿಶಾರದ. (ಮದ್ರಾಸ್)



ಪ್ರಕಾಶಕರು :

ಎಸ್. ಎಸ್. ಎನ್. ಬುಕ್ ಡಿಪೋ,

ಬೆಂಗಳೂರು ನಗರ.

ಪ್ರಥಮ ಮುದ್ರಣ ] ೧೯೪೦ [ ಬೆಲೆ ೮ ಆಣೆ

# ಮುನ್ನುಡಿ

---

ದಿವಂಗತ ಶರತ್‌ಬಾಬುಗಳ ಪರಿಚಯವು ಕನ್ನಡ ಜನಾಂಗಕ್ಕೆ ಸಾಕಷ್ಟು ಆಗಿದೆ. ಅವರ ಕೆಲವು ಕೃತಿಗಳನ್ನು ಕನ್ನಡಿಗರು ಓದಿ ಆನಂದ ಪಟ್ಟಿದ್ದಾರೆ. ಅವರ ಎಲ್ಲ ಕೃತಿಗಳನ್ನೂ ಅನುವಾದಿಸಿ ಕನ್ನಡ ಕುಲಕ್ಕೆ ಅರ್ಪಿಸಬೇಕೆಂಬ ಹಂಬಲವು ನಮಗಿದೆ. ಈಗ ನಾವು ಕನ್ನಡಿಗರಿಗೆ 'ಬಿಂದುವಾಸಿನಿಯ ಮಗ' ಎಂಬ ಪುಟ್ಟ ಕಾದಂಬರಿಯನ್ನು ಒಪ್ಪಿಸುತ್ತಿದ್ದೇವೆ. ಇದೂ ಶರತ್‌ಬಾಬುಗಳ ಅನ್ಯಕೃತಿಗಳಂತೆಯೆ ಓದುಗರಿಗೆ ಮೆಚ್ಚುಗೆಯದಾಗಬಹುದೆಂದು ನಮ್ಮ ನಂಬುಗೆ.

ಈ ಪುಟ್ಟ ಕಾದಂಬರಿಯನ್ನು ನಮ್ಮ ನಾಡಿನ ಹೆಣ್ಣುಮಕ್ಕಳು ಅವಶ್ಯವಾಗಿ ಓದಲೇಬೇಕೆಂದು ನಮ್ಮ ನಮ್ರವಾದ ಅರಿಕೆ. ಏಕೆಂದರೆ ಇದರಲ್ಲಿ ಶರತ್‌ಬಾಬುಗಳು ಆದರ್ಶತಾಯಿಯ ಸುರಮ್ಯವಾದ ಚಿತ್ರವೊಂದನ್ನು ನಮ್ಮೆದುರಿಗೆ ಸಹಜವಾದ ಶೈಲಿಯಲ್ಲಿ ಇಟ್ಟಿದ್ದಾರೆ. ಬಿಂದುವಾಸಿನಿಯ ತಾಯುಕರುಳು ಎಷ್ಟು ಶ್ರೇಷ್ಠವಾಗಿದೆಯೆಂಬುದನ್ನು ಪುಸ್ತಕವನ್ನು ಓದಿ ಅನುಭವಿಸಬೇಕೇ ವಿನಾ ವರ್ಣಿಸಲಾಗುವುದಿಲ್ಲ.

ಕಾಗದದ ಬೆಲೆಯು ಏರಿದ್ದ ಈ ಕಾಲದಲ್ಲಿ ಪುಸ್ತಕವನ್ನು ಪ್ರಸಿದ್ಧಿಸಲು ಮುಂದೆ ಬಂದ ಶ್ರೀ ಎಸ್. ಎಸ್. ಎ. ಬುಕ್ ಡಿಪೋದವರಿಗೂ ಪುಸ್ತಕವನ್ನು ಅಲ್ಪಾವಧಿಯಲ್ಲಿ ಅಂದವಾಗಿ ಮುದ್ರಿಸಿದ 'ಒಕ್ಕಲಿಗರ ಸಂಘ ಪ್ರೆಸ್'ನವರಿಗೂ ನಮ್ಮ ಹೃತ್ಪೂರ್ವಕ ಅಭಿನಂದನೆಗಳು.

ಗುರುನಾಥ ಜೋಶಿ,

ಎಂ. ಎ. ಕುಪ್ಪಮ್ಮ.

# ಬಿಂದುವಾಸಿನಿಯ ಮಗ

## ೧

ಯಾದವ ಮುಖರ್ಜಿ ಮತ್ತು ಮಾಧವ ಮುಖರ್ಜಿ ಇಬ್ಬರೂ ಒಡಹುಟ್ಟಿದ ಅಣ್ಣ-ತಮ್ಮಂದಿರಲ್ಲ. ಆದರೂ ಅವರು ಬಹಳ ಅನ್ಯೋನ್ಯದಿಂದಲೂ ಪ್ರೀತಿಯಿಂದಲೂ ಇರುತ್ತಿದ್ದ ಕಾರಣ ಈ ಮಾತನ್ನೇ ಮರೆತುಬಿಟ್ಟಿದ್ದರು; ಹೊರಗಿನವರು ಸಹ ಈ ಮಾತನ್ನು ಮರೆತು ಅವರು ಒಡಹುಟ್ಟಿದ ಸಹೋದರರೆಂದೇ ಭಾವಿಸಿದ್ದರು. ಯಾದವನು ಬಡವನಾದರೂ ಅನೇಕ ಕಷ್ಟ-ನಷ್ಟಗಳನ್ನು ಸಹಿಸಿ, ತಮ್ಮನಾದ ಮಾಧವನನ್ನು ವಕಾಲತ್ತು ಪರೀಕ್ಷೆಯ ವರೆಗೂ ಓದಿಸಿದ್ದನು. ಅಲ್ಲದೆ ಪ್ರಯತ್ನಪಟ್ಟು ಧನವಂತರಾದ ಜಮೀನ್ದಾರರ ಏಕಮಾತ್ರ ಪುತ್ರಿಯಾದ ಬಿಂದುವಾಸಿನಿಯನ್ನು ಮಾಧವನಿಗೆ ತಂದು ಮದುವೆ ಮಾಡಿದ್ದ. ಬಿಂದುವಾಸಿನಿ ಅಸಾಧಾರಣ ರೂಪವತಿ. ತನ್ನ ಅತುಲನೀಯ ರೂಪ ಮತ್ತು ಹತ್ತು ಸಾವಿರ ರೂಪಾಯಿಗಳ ಪ್ರಾಮಿಸರಿ ನೋಟನ್ನು ತೆಗೆದುಕೊಂಡು ಆಕೆಯು ಮೊಟ್ಟಮೊದಲು ಈ ಮನೆಗೆ ಬಂದಳು ಆ ದಿನ ದೊಡ್ಡ ಸೊಸೆಯಾದ ಅನ್ನಪೂರ್ಣೆಯ ಆನಂದಕ್ಕೆ ಪಾರವೇ ಇರಲಿಲ್ಲ. ಮನೆಯಲ್ಲಿ ಅತ್ತೆ-ನಾದಿನಿಯರಾರೂ ಇಲ್ಲ. ಅವಳೇ ಮನೆಯ ಯಜಮಾನಿ. ಆ ದಿನ ಅವಳು ಚಿಕ್ಕ ಸೊಸೆಯ ಮುಖದ ಮೇಲಿನ ಮುಸುಕನ್ನು ಸರಿಸಿ, ತನ್ನ ನೆರೆಮನೆಯವಳೊಡನೆ ಹೆಮ್ಮೆಯಿಂದ "ಮನೆಗೆ ಸೊಸೆಯನ್ನು ತಂದರೆ ಇಂತಹ ಸೊಸೆಯನ್ನು ತರಬೇಕು! ಲಕ್ಷ್ಮಿಯ ಪ್ರತಿಮೆ!" ಎಂದು ಹೇಳಿದ್ದಳು.

ಆದರೆ ಎರಡು ದಿನಗಳಲ್ಲೇ ಆಕೆಗೆ ತನ್ನ ತಪ್ಪು ತಿಳಿಯಿತು. ಚಿಕ್ಕ ಸೊಸೆಯು ಬರುವಾಗ ಎಷ್ಟು ರೂಪ ಮತ್ತು ರೂಪಾಯಿಗಳನ್ನು ತನ್ನೊಡನೆ

ತಂದಿದ್ದಳೋ ಅದಕ್ಕೆ ನಾಲ್ಕರಷ್ಟು ಅಹಂಕಾರ ಮತ್ತು ಅಭಿಮಾನಗಳನ್ನು ಸಂಗಡ ತಂದಿದ್ದಳೆಂಬುದು ತಿಳಿಯಿತು. ಒಂದು ದಿನ ದೊಡ್ಡ ಸೊಸೆಯು ತನ್ನ ಪತಿಯನ್ನು ಏಕಾಂತವಲ್ಲಿ ಕರೆದು "ಕೇವಲ ರೂಪ ಮತ್ತು ರೂಪಾಯಿಗಳನ್ನು ನೋಡಿ ಸೊಸೆಯನ್ನು ತಂದಿರಿ, ಆದರೆ ಈಕೆ ನಿಜವಾಗಿಯೂ ಕಾಳಸರ್ಪವೇ ಸರಿ!" ಎಂದಳು.

ಯಾದವನಿಗೆ ಈ ಮಾತಿನಲ್ಲ ನಂಬಿಕೆಯಾಗಲಿಲ್ಲ. ಅವನು ತಲೆಯಲ್ಲಾಡಿಸುತ್ತ, ಒಂದೆರಡು ಸಲ 'ಅದು' 'ಅದು' ಎನ್ನುತ್ತಿರುವಂತೆಯೇ ಕಚೇರಿಗೆ ಹೊರಟುಹೋದ.

ಯಾದವನು ಅತ್ಯಂತ ಶಾಂತಪ್ರಕೃತಿಯ ಮನುಷ್ಯ. ಅವನು ಜಮೀನ್‌ದಾರನ ಬಳಿ ಗುಮಾಸ್ತನ ಕೆಲಸ ಮಾಡುತ್ತಿದ್ದ; ಮತ್ತು ಮನೆಗೆ ಬಂದು ಪೂಜಾ-ಪಾಠದಲ್ಲಿ ತೊಡಗುತ್ತಿದ್ದ. ಮಾಧವನು ತನ್ನ ಅಣ್ಣನಿಗಿಂತ ಹತ್ತು ವರ್ಷ ಚಿಕ್ಕವನು. ವಕೀಲನಾಗಿ ಅವನು ಆಗತಾನೇ ತನ್ನ ಕಾರ್ಯವನ್ನು ಆರಂಭಿಸಿದ್ದನು.

ಅವನು ಅನ್ನಪೂರ್ಣೆಯ ಬಳಿಗೆ ಬಂದು "ಅತ್ತಿಗೆ, ಅಣ್ಣನಿಗೆ ದುಡ್ಡೇ ದೊಡ್ಡ ವಸ್ತುವಾಯಿತೇ? ಇನ್ನು ಕೆಲವು ದಿನಗಳು ತಡೆದಿದ್ದರೆ ನಾನೂ ಸಹ ಸಂಪಾದಿಸಿ ತರುತ್ತಿದ್ದೆ" ಎಂದು ಹೇಳಿದ.

ಅನ್ನಪೂರ್ಣೆಯು ಏನನ್ನೂ ಹೇಳಲಿಲ್ಲ.

ಬಿಂದುವಾಸಿನಿಯು ಯಾರ ಮಾತನ್ನೂ ಕೇಳುವವಳಲ್ಲ. ಅವಳ ಮೇಲೆ ಅಧಿಕಾರ ನಡೆಸುವುದು ಹಾಗೂ ಅವಳನ್ನು ಅಧೀನದಲ್ಲಿರಿಸುವುದು ಸುಲಭವಾದ ಮಾತಾಗಿರಲಿಲ್ಲ. ಅದೂ ಅಲ್ಲದೆ ಅವಳಿಗೆ ಭಯಾನಕವಾದ 'ಫಿಟ್ಸ್' ಖಾಯಿಲೆಯಿತ್ತು. ಇದನ್ನು ಕಂಡೊಡನೆಯೇ ಮನೆಯವರೆಲ್ಲರೂ ಗಾಬರಿಗೊಳ್ಳುತ್ತಿದ್ದರು. ಡಾಕ್ಟರನ್ನು ಕರೆಸಿದ ಹೊರತು ಬೇರೆ ಉಪಾಯವೇ ಇರುತ್ತಿರಲಿಲ್ಲ. ಆದುದರಿಂದ "ಇಷ್ಟು ಪ್ರಯತ್ನಪಟ್ಟು ವಿವಾಹಮಾಡಿಯೂ ಕಡೆಗೆ ಮೋಸವಾಯಿತು" ಎಂಬ ಒಂದೇ ಭಾವನೆಯು ಎಲ್ಲರ ಮನದಲ್ಲೂ ಗಟ್ಟಿಯಾಗಿ ಕುಳಿತಿತು. ಕೇವಲ ಯಾದವನೊಬ್ಬನು ಎದೆಗುಂದಲಿಲ್ಲ. ಎಲ್ಲರನ್ನೂ ಎದುರಿಸಿ ನಿಂತು ಅವನು "ಇಲ್ಲ, ಇಲ್ಲ, ನಿಮಗೆ ನಂತರ

ಗೊತ್ತಾಗುವುದು. ನನ್ನ ಬಹೂರಾಣಿಯು* ಲಕ್ಷ್ಮಿಯಂತಹ ರೂಪವು ನಿಷ್ಫಲವಾಗುವುದೇ ? ಎಂದಿಗೂ ಹಾಗಾಗಲಾರದು '' ಎನ್ನುತ್ತಿದ್ದ.

ಒಂದು ದಿನ ಏನೋ ಮಾತಿಗಾಗಿ ಚಿಕ್ಕ ಸೊಸೆ (ಬಿಂದುವಾಸಿನಿ)ಯು ಉದಾಸೀನತೆಯಿಂದ ಕುಳಿತಿದ್ದಳು. ಅದನ್ನು ಕಂಡು ಅನ್ನಪೂರ್ಣೆಗೆ ಬಹಳ ಭಯವಾಯಿತು. ಒಡನೆಯೇ ಅವಳಿಗೆ ಏನು ತೋರಿತೋ ! ರೂಮಿಗೆ ಓಡಿಹೋದಳು. ನಿದ್ರೆ ಮಾಡುತ್ತಿದ್ದ ತನ್ನ ಒಂದೂವರೆ ವರ್ಷದ ಮಗುವಾದ ಅಮೂಲ್ಯಚರಣನನ್ನು ಎತ್ತಿಕೊಂಡು ಬಂದು ಬಿಂದುವಾಸಿನಿಯ ಮಡಿಲಲ್ಲಿ ಹಾಕಿ ಹೊರಟುಹೋದಳು.

ಅರ್ಧನಿದ್ರೆಯಲ್ಲಿ ಎಚ್ಚರಗೊಂಡುದರಿಂದ ಅಮೂಲ್ಯ ಅಳತೊಡಗಿದ. ಬಿಂದುವಾಸಿನಿಗೆ ಆಗ ಮೈಮೇಲೆ ಎಚ್ಚರವುಂಟಾಯಿತು. ಮಗುವನ್ನು ಪ್ರೀತಿಯಿಂದ ಅಪ್ಪಿಕೊಂಡು ಅವಳು ರೂಮಿಗೆ ಹೋದಳು.

ಅನ್ನಪೂರ್ಣೆಯು ಎಲ್ಲವನ್ನೂ ಮರೆಯಲ್ಲಿ ನಿಂತು ನೋಡುತ್ತಿದ್ದಳು. ಬಿಂದುವಾಸಿನಿಯ 'ಫಿಟ್' ಖಾಯಿಲೆಗೆ ಈ ಮಹೌಷಧಿಯನ್ನು ಹುಡುಕಿದುದಕ್ಕಾಗಿ ಅವಳಿಗೆ ಅತ್ಯಂತ ಆನಂದವಾಯಿತು.

ಸಂಸಾರದ ಭಾರವೆಲ್ಲಾ ಅನ್ನಪೂರ್ಣೆಯ ತಲೆಯ ಮೇಲೆಯೇ ಬಿದ್ದಿತ್ತು. ಮಗುವನ್ನು ಸರಿಯಾಗಿ ಸುಧಾರಿಸುವುದು ಸಾಧ್ಯವಾಗುತ್ತಿರಲಿಲ್ಲ. ಅದರಲ್ಲೂ ದಿನವೆಲ್ಲಾ ಕೆಲಸಮಾಡಿ, ರಾತ್ರಿಯ ಹೊತ್ತು ನಿದ್ರೆ ಮಾಡದಿದ್ದರೆ ಅವಳ ದೇಹಸ್ಥಿತಿ ಕೆಟ್ಟುಹೋಗುತ್ತಿತ್ತು. ಆದುದರಿಂದ ಬಿಂದುವಾಸಿನಿಯು ಮಗುವಿನ ಭಾರವನ್ನು ತಾನು ವಹಿಸಿಕೊಂಡಳು.

ಸುಮಾರು ಒಂದು ತಿಂಗಳ ಬಳಿಕ ಒಂದು ದಿನ ಬಿಂದುವು ಮಗುವನ್ನು ಎತ್ತಿಕೊಂಡು ಅಡಿಗೆಯ ಮನೆಯನ್ನು ಪ್ರವೇಶಿಸಿ, '' ಅಕ್ಕ ! ಅಮೂಲ್ಯನ ಹಾಲು ಎಲ್ಲಿದೆ ? '' ಎಂದು ಕೇಳಿದಳು.

ಅನ್ನಪೂರ್ಣೆಯು ಥಟ್ಟನೆ ಮಾಡುತ್ತಿದ್ದ ಕೆಲಸವನ್ನು ಬಿಟ್ಟು ಭಯದಿಂದ '' ಒಂದು ನಿಮಿಷ ತಡೆ. ಇದೋ, ಬಿಸಿ ಮಾಡಿ ಕೊಡುವೆನು '' ಎಂದಳು.

---

* ಉತ್ತರ ಹಿಂದೂಸ್ತಾನದಲ್ಲಿ ಪ್ರೀತಿಯ ಸೊಸೆಗೆ ಬಹೂರಾಣೀ ಎಂದು ಸಂಬೋಧಿಸುವ ವಾಡಿಕೆ. ಬಹೂರಾಣಿ ಎಂದರೆ ಸೊಸೆ-ರಾಣಿ.

ಬಿಂದುವಾಸಿನಿಯು ಒಳಹೊಕ್ಕು ನೋಡಲಾಗಿ ಹಸಿಯ ಹಾಲು ಹಾಗೆಯೇ ಇರಿಸಿತ್ತು. ಅವಳಿಗೆ ಮಿತಿಮೀರಿ ಕೋಪ ಬಂತು. ತೀಕ್ಷ್ಣ ಸ್ವರದಿಂದ ಅವಳು "ಎಂಟು ಗಂಟೆಗೆ ಮುಂಚೆಯೇ ಹಾಲು ಬೇಕೆಂದು ನಾನು ನಿನ್ನೆಯೇ ನಿಮಗೆ ತಿಳಿಸಿರಲಿಲ್ಲವೇ? ಈಗ ಒಂಬತ್ತು ಗಂಟೆಯಾಗುತ್ತ ಬಂತು. ಇಷ್ಟು ಚಿಕ್ಕ ಕೆಲಸವು ನಿಮಗೆ ಕಷ್ಟವಾದರೆ ಆಗಲೇ ಸ್ಪಷ್ಟವಾಗಿ ಏಕೆ ಹೇಳಬಾರದಾಗಿತ್ತು? ಬೇರೆ ಯಾವುದಾದದರೂ ಮಾರ್ಗವನ್ನು ನೋಡಿಕೊಳ್ಳುತ್ತಿದ್ದೆ! ಹೋಗಲಿ, ಮಿಸ್‌ರಾನಿ* ಯವರೇ, ನಿಮಗಾದರೂ ಅಷ್ಟು ಬುದ್ಧಿ ಬೇಡವೇ? ಬಾಕಿ ಎಲ್ಲ ಕೆಲಸ ನಂತರ ಮಾಡಿದ್ದರೆ ಆಗುತ್ತಿತ್ತು!" ಎಂದಳು.

ಅಡಿಗೆಯವಳು ಏನೂ ಮಾತನಾಡಲಿಲ್ಲ. ಅನ್ನಪೂರ್ಣೆಯು "ನಿನ್ನಂತೆ ಕೇವಲ ಮಗುವಿನ ಕಣ್ಣಿಗೆ ಕಾಡಿಗೆ ಹಚ್ಚುವುದು, ಹಣೆಗೆ ತಿಲಕ ತಿದ್ದುವುದು, ಇದೇ ಕೆಲಸವಾಗಿದ್ದರೆ ನಮಗೂ ಬುದ್ಧಿ ಹಾಗೂ ಜ್ಞಾನವಿರುತ್ತಿತ್ತು! ಒಂದು ನಿಮಿಷ ಸಹ ತಡೆಯಲಿಕ್ಕೆ ಆಗುವುದಿಲ್ಲವೆ?" ಎಂದಳು

ಅದಕ್ಕುತ್ತರವಾಗಿ ಬಿಂದುವು ಅತ್ಯಂತ ಕೋಪದಿಂದ "ಇನ್ನು ಮುಂದೆ ಮಗುವಿನ ಹಾಲನ್ನು ನೀವು ಕೈಯಿಂದ ಸಹ ಮುಟ್ಟಿದರೆ ನನ್ನಾಣೆ. ಪುನಃ ನಾನು ನಿಮಗೆ ಹೇಳಿದರೆ ನೀವು ಇಟ್ಟ ಆಣೆ!" ಎಂದು ಮಗುವನ್ನು ಧಡಮ್ಮನೆ ನೆಲದ ಮೇಲೆ ಕುಕ್ಕರಿಸಿ, ಹಾಲಿನ ಪಾತ್ರೆಯನ್ನು ತೆಗೆದು ಒಲೆಯ ಮೇಲಿಂಸಿದಳು. ಪೆಟ್ಟು ಬಿದ್ದುದರಿಂದ ಅಮೂಲ್ಯ ಅತಿಯಾಗಿ ಅಳತೊಡಗಿದ. ಕ್ರೋಧದಿಂದ ಬಿಂದುವಾಸಿನಿಯು ಅವನ ಕತ್ತನ್ನು ಹಿಡಿದು ಗದರಿಸಿ 'ಮುಚ್ಚು ಬಾಯಿ! ದುಷ್ಟ, ಬಾಯಿ ಮುಚ್ಚು! ಅರಚಿದೆಯಾದರೆ ಹೊಡೆದು ಕೊಂದುಹಾಕಿ ಬಿಡುವೆನು." ಎಂದಳು.

ಬಿಂದುವಾಸಿನಿಯ ಈ ರೀತಿಯ ವರ್ತನೆಯನ್ನು ಕಂಡ ಮನೆಗೆಲಸಗವಳಾದ ಕಮಲೆಯು ಓಡಿಬಂದು ಮಗುವನ್ನು ಎತ್ತಿಕೊಳ್ಳಲು ಹೋದಳು. ಅವಳನ್ನು ಬಿಂದುವಾಸಿನಿಯು ಗದರಿಸಿ "ದೂರ ನಡೆ! ಎದುರಿಗೆ ನಿಲ್ಲಬೇಡ, ಹೋಗು ಕಣ್ಮರೆಯಾಗು!" ಎಂದಳು.

---

* ಉತ್ತರ ಹಿಂದೂಸ್ಥಾನದ ಕಡೆಯಲ್ಲಿ ಅಡಿಗೆಯವಳನ್ನು ಮಿಸ್‌ರಾನೀ ಎಂದು ಕರೆಯುವ ವಾಡಿಕೆಯುಂಟು.

ಪೆಚ್ಚು ಮೋರೆ ಹಾಕಿಕೊಂಡು ಭಯದಿಂದ ಅವಳು ನಿಂತಲ್ಲಿಯೇ ನಿಂತುಬಿಟ್ಟಳು.

ಬಿಂದುವಾಸಿನಿಯು ಪುನಃ ಯಾರೊಡನೆಯೂ ಏನನ್ನೂ ಹೇಳಲಿಲ್ಲ. ಮಗುವಿನ ಹಾಲನ್ನು ಬಿಸಿ ಮಾಡತೊಡಗಿದಳು.

ಅನ್ನಪೂರ್ಣೆಯೂ ಸುಮ್ಮನೆ ನಿಂತಿದ್ದಳು ಬಿಂದುವಾಸಿನಿಯು ಹಾಲು ತೆಗೆದುಕೊಂಡು ಹೊರಟು ಹೋದನಂತರ ಅವಳು ಅಡಿಗೆಯವ ಳೊಡನೆ "ಮಿಸ್‌ರಾನೀ, ಕೇಳಿದೆಯಾ ಇವಳ ಮಾತು? ಆ ದಿನ ನಾನು ತಮಾಷೆಗಾಗಿ ಅಮೂಲ್ಯನನ್ನು ನೀನು ತೆಗೆದುಕೋ, ಎಂದು ಹೇಳಲಿಲ್ಲವೇ? ಆ ಜೋರಿನಿಂದ ಈ ದಿವಸ ನನ್ನ ವಿಚಾರವಾಗಿ ಸಹ ಆಣೆ—ಭಾಷೆಗಳನ್ನು ನುಡಿದಳು! ನೋಡಿದೆಯಾ?" ಎಂದಳು.

ಏನೇ ಇರಲಿ, ಅಂತೂ ಅನ್ನಪೂರ್ಣೆಯ ಮಗನು ಬಿಂದುವಾಸಿನಿಯ ಬಳಿಯಲ್ಲೇ ಬೆಳೆಯುತ್ತ ಬಂದ. ಅದರ ಫಲವಾಗಿ ಅವನು ಚಿಕ್ಕಮ್ಮನನ್ನು 'ಅಮ್ಮ' ಎಂದೂ ಅಮ್ಮನನ್ನು 'ಅಕ್ಕ' ಎಂದೂ ಕೂಗಲು ಕಲಿತ.

೨

ಮೂರು-ನಾಲ್ಕು ವರ್ಷಗಳ ಬಳಿಕ ಅಮೂಲ್ಯನ ಅಕ್ಷರಾಭ್ಯಾಸವು ಅತಿ ವಿಜೃಂಭಣೆಯಿಂದ ನಡೆಯಿತು. ಅದರ ಮರುದಿನ ಮುಂಜಾನೆ ಅನ್ನ-ಪೂರ್ಣೆಯು ಅಡಿಗೆಯ ಕೆಲಸವಲ್ಲಿ ಮಗ್ನಳಾಗಿದ್ದಳು. ಹೊರಗಿನಿಂದ ಬಿಂದುವಾಸಿನಿಯು ಅವಳನ್ನು ಕೂಗಿ "ಅಕ್ಕ, ಅಮೂಲ್ಯನು ನಮಸ್ಕರಿಸಲು ಬಂದಿರುವನು. ಸ್ವಲ್ಪ ಹೊರಗೆ ಬನ್ನಿ" ಎಂದಳು.

ಅನ್ನಪೂರ್ಣೆಯು ಹೊರಗೆ ಬಂದಳು. ಅಮೂಲ್ಯನ ಠೀವಿಯನ್ನು ಕಂಡು ಚಕಿತಳಾದಳು. ಮಗನ ಕಣ್ಣುಗಳಲ್ಲಿ ಕಾಡಿಗೆ, ಹಣೆಯಲ್ಲಿ ತಿಲಕ, ಕೊರಳಲ್ಲಿ ಚಿನ್ನದ ಹಾರ, ತಲೆಯಮೇಲೆ ಕಟ್ಟಿದ ಕೂದಲು, ಪೀತವರ್ಣದ ವಸನ, ಒಂದು ಕೈಯಲ್ಲಿ ಮಸಿಕುಡಿಕೆ ಮತ್ತು ಲೇಖನಿ, ಅಲ್ಲದೆ ಕಂಕುಳಲ್ಲಿ ಸಣ್ಣ ಚಾಪೆಯಲ್ಲಿ ಸುತ್ತಿರಿಸಿದ ಕೆಲವು ತಾಡಪತ್ರಗಳು ಇದ್ದುವು.

"ಅಕ್ಕನಿಗೆ ನಮಸ್ಕಾರ ಮಾಡು ಮಗೂ!" ಎಂದಳು ಬಿಂದುವಾಸಿನಿ.

ಅಮೂಲ್ಯನು ತನ್ನ ತಾಯಿಗೆ ನಮಸ್ಕರಿಸಿದ.

ಅವನ ಕಾಲುಗಳಲ್ಲಿ ಬೂಟ್ಸೇ ಆಗಲಿ, ಕಾಲು-ಚೀಲವೇ ಆಗಲಿ ಇರಲಿಲ್ಲ. ಮೈಮೇಲೆ ವಿಲಾಯತಿ ರೀತಿಯ ಉಡುಪುಗಳೂ ಇರಲಿಲ್ಲ. ಈ ವಿಚಿತ್ರ ವೇಷ-ಭೂಷಣಗಳನ್ನು ಕಂಡು ಅನ್ನಪೂರ್ಣೆಯು ನಗುತ್ತ "ಬಿಂದೂ, ನಿನಗೂ ಇಷ್ಟು ಗೊತ್ತೇ? ಮಗು ಓದುವುದಕ್ಕೆ ಹೋಗುವನೇ?" ಎಂದು ಕೇಳಿದಳು.

ಬಿಂದುವಾಸಿನಿಯು ನಗುತ್ತ "ಹೌದು, ಅಕ್ಕ! ಗಂಗಾಪಂಡಿತರ ಪಾಠಶಾಲೆಗೆ ಕಳುಹಿಸುವೆನು. ಆಶೀರ್ವಾದ ಮಾಡಿರಿ. ಅವನ ಜೀವನದಲ್ಲಿ ಇಂದಿನ ದಿನವು ಸಾರ್ಥಕವಾಗಲಿ! ಎಂದಳು.

ಪುನಃ ನೌಕರನ ಕಡೆಗೆ ತಿರುಗಿ "ಭೈರೂ, ಪಂಡಿತಜೀಯವರಿಗೆ ನನ್ನ ಹೆಸರನ್ನು ತಿಳಿಸಿ, ನನ್ನ ಮಗನನ್ನು ಯಾರೂ ಹೊಡೆದು ಬಡಿದು ಬೈದು ಮಾಡದಿರುವಂತೆ ನೋಡಿಕೊಳ್ಳಬೇಕೆಂದು ಹೇಳು. ಅಕ್ಕ! ಈ ಐದು ರೂಪಾಯಿಗಳನ್ನು ಸರಿಯಾಗಿರಿಸಿ ಕಮಲೆಯ ಕೈಲಿ ಪಂಡಿತಜೀಯವರಿಗೆ ಕೊಟ್ಟು ಕಳುಹಿಸಿ!" ಎಂದು ಹೇಳುತ್ತ ಮಗನನ್ನು ಮುದ್ದಿಟ್ಟು, ಎತ್ತಿಕೊಂಡು ಹೋದಳು.

ಅನ್ನಪೂರ್ಣೆಯು ಕಣ್ಣುಗಳಲ್ಲಿ ನೀರು ತುಂಬಿ ಬಂತು. ಅವಳು ಅಡಿಗೆಯವಳೊಡನೆ "ಮಗನ ವಿಚಾರದಲ್ಲೇ ಯಾವಾಗಲೂ ಮಗ್ನಳಾಗಿರುವಳು ಅದರಲ್ಲೂ ಹೊಟ್ಟೆಯಲ್ಲಿ ಹುಟ್ಟಿದ ಮಗ ಸಹ ಅಲ್ಲ. ಹಾಗಿದ್ದರೆ ಇನ್ನೇನು ಮಾಡುತ್ತಿದ್ದಳೋ!" ಎಂದಳು.

ಅಡಿಗೆಯವಳು "ಅದಕ್ಕೇ ದೇವರು ಕೊಡಲಿಲ್ಲ. ೧೬—೧೭ ವರ್ಷವಾಯಿತು—" ಎಂದಳು.

ಮಾತು ಪೂರ್ತಿಯಾಗುವಷ್ಟರಲ್ಲೇ ಚಿಕ್ಕ ಸೊಸೆಯು ಮಗುವನ್ನು ಬಿಟ್ಟು ಹಿಂತಿರುಗಿ ಬಂದು "ಅಕ್ಕ! ಭಾವನವರೊಡನೆ ಹೇಳಿ ನಮ್ಮ ಮನೆಯ ಮುಂದೆಯೇ ಒಂದು ಪಾಠಶಾಲೆಯನ್ನು ತೆರೆಸುವುದಕ್ಕೆ. ಇದು ಆಗುವುದಿಲ್ಲವೇ? ಅದರ ಎಲ್ಲ ಖರ್ಚನ್ನೂ ನಾನು ಕೊಡುವೆನು" ಎಂದಳು.

ಅನ್ನಪೂರ್ಣೆಯು ಗೊಳ್ಳನೆ ನಕ್ಕಳು. "ಇನ್ನೂ ನಾಲ್ಕು ಹೆಜ್ಜೆ ಸಹ ಹೋಗಲಿಲ್ಲ. ಅಷ್ಟರಲ್ಲಿ ಮನಸ್ಸು ಬದಲಾಯಿಸಿತೇ? ಇಲ್ಲದಿದ್ದರೆ ನೀನೂ ಹೋಗಿ ಅವನೊಡನೆ ಪಾಠಶಾಲೆಯಲ್ಲಿ ಕುಳಿತಿರು" ಎಂದಳು.

ಬಿಂದುವಾಸಿನಿಯು ಲಜ್ಜಿತಳಾದಳು. ಅವಳು ನಗುತ್ತ "ಇಲ್ಲ ಅಕ್ಕ! ಮನಸ್ಸು ಬದಲಾಯಿಸಲಿಲ್ಲ. ಆದರೆ ಕಣ್ಮುಂದೆ ಇರುವುದೇ ಒಂದು ವಿಧ, ಕಣ್ಮರೆಯಾಗಿರುವುದೇ ಇನ್ನೊಂದು ವಿಧ. ಸಂಗಡ ಓದುವ ತುಂಟ ಹುಡುಗರು ಇವನು ಚಿಕ್ಕವನೆಂದರಿತು ಹೊಡೆದರೆ? ಬಡಿದರೆ?" ಎಂದಳು.

ಅನ್ನಪೂರ್ಣೆಯು "ಅದರಲ್ಲೇನು? ಹೊಡೆದು-ಬಡಿದಾಡುವುದು ಮಕ್ಕಳ ಸ್ವಭಾವ. ಅದೂ ಅಲ್ಲದೆ ಎಲ್ಲರ ಮಕ್ಕಳೂ ಒಂದೇ ಬಿಂದೂ ;— ಅವರ ತಂದೆ ತಾಯಿಗಳೆಲ್ಲರೂ ಕಠಿನ ಮನಸ್ಸು ಮಾಡಿ ಅವರನ್ನು ಶಾಲೆಗೆ ಕಳುಹಿಸುತ್ತಿರುವಾಗ ನೀನೇಕೆ ಕಳುಹಿಸಬಾರದು?" ಎಂದಳು.

ಮತ್ತೊಬ್ಬರೊಡನೆ ಹೋಲಿಸಿ ಈ ರೀತಿ ಮಾತನಾಡುವುದನ್ನು ಕಂಡರೆ ಬಿಂದುವಿಗೆ ಕೋಪ ಉಕ್ಕೇರಿ ಬರುತ್ತಿತ್ತು. ಅಂತೆಯೇ ಅವಳು ಅಸಂತುಷ್ಟಳಾಗಿ "ಯಾವಾಗಲೂ ನಿಮ್ಮ ಮಾತೇ ಹೀಗೆ ಅಕ್ಕ! ಒಂದು ವೇಳೆ ಯಾರಾದರೂ ದುಷ್ಟ ಹುಡುಗರು ಅವನ ಕಣ್ಣುಗಳಲ್ಲಿ ಲೇಖನಿಯನ್ನು ಚುಚ್ಚಿಬಿಟ್ಟರೆ, ಆಗ?" ಎಂದಳು.

ಅವಳ ಮನಸ್ಸಿನ ಭಾವನೆಯನ್ನರಿತು ಅನ್ನಪೂರ್ಣೆಯು ನಕ್ಕು "ಆಗ ಡಾಕ್ಟರಿಗೆ ತೋರಿಸುವುದು! ಮತ್ತೇನು? ಆದರೆ ಬಿಂದೂ, ನಾನು ನಿಜವಾಗಿ ಹೇಳುವೆನು; ಏಳು ದಿನ ಹಗಲು-ರಾತ್ರಿ ಕುಳಿತು ಯೋಚನೆ ಮಾಡಿದ್ದರೂ ಈ 'ಕಣ್ಣು ಚುಚ್ಚುವ' ಮಾತು ನನ್ನ ಬುದ್ಧಿಗೆ ಹೊಳೆಯುತ್ತಿರಲಿಲ್ಲ. ಇಷ್ಟು ಹುಡುಗರು ಶಾಲೆಗೆ ಓದಲು ಬರುವರು. ಈ ರೀತಿ ಒಬ್ಬರು ಮತ್ತೊಬ್ಬರ ಕಣ್ಣು ಚುಚ್ಚುವುದನ್ನು ನಾನು ಇದುವರೆಗೂ ಕೇಳಿಲ್ಲ!" ಎಂದಳು.

ಬಿಂದುವಾಸಿನಿಯು "ನೀವು ಕೇಳಿಲ್ಲದಿದ್ದ ಮಾತ್ರಕ್ಕೆ ಹಾಗೆ ಆಗಿರಬಾರದೇ? ಭವಿಷ್ಯದ ಮಾತನ್ನು ಹೇಳಲು ಯಾರಿಂದ ಸಾಧ್ಯ? ಅದಿರಲಿ, ನೀವು ಒಂದುಸಲ ಹೇಳಿ ನೋಡಿರಿ, ನಂತರ ಏನಾಗುವುದೋ ನೋಡೋಣ!" ಎಂದಳು.

ಅನ್ನಪೂರ್ಣೆಯು ಗಂಭೀರಭಾವದಿಂದ "ಏನಾಗುವುದೆಂಬುದು ಚೆನ್ನಾಗಿ ತಿಳಿದೇ ಇದೆ. ನೀನು ಮನಸ್ಸಿನಲ್ಲಿ ನಿಶ್ಚಯಮಾಡಿದ ಬಳಿಕ ಆ ಕೆಲಸವನ್ನು ಪೂರ್ತಿಮಾಡದೆ ಬಿಡುವೆಯಾ? ಆದರೆ ಈ ರೀತಿ ಪ್ರಪಂಚಕ್ಕೆ

ವಿರುದ್ಧವಾದ ಮಾತನ್ನು ನಾನು ನನ್ನ ಬಾಯಿಂದ ಹೇಳಲಾರೆ. ಅಷ್ಟೇಕೆ? ನೀನೇ ಅವರೊಡನೆ ಮಾತನಾಡುವೆಯಲ್ಲ! ಹೋಗಿ ತಿಳಿಸು!'' ಎಂದಳು.

ಬಿಂದುವಾಸಿನಿಗೆ ಇನ್ನು ಕೋಪ ತಡೆಯಲಾಗಲಿಲ್ಲ. ಅವಳು ''ಅದಕ್ಕೇನು? ಹೇಳಿಯೇ ಹೇಳುವೆನು! ನನ್ನ ಮಗುವಿಗೆ ವಿದ್ಯೆ ಬರಲಿ, ಬರದಿರಲಿ; ಇದರಿಂದ ಯಾರಿಗೆ ಎಷ್ಟು ಕೋಪ ಬಂದರೂ ಬರಲಿ; ನಾನೇನೋ ಅವನನ್ನು ನಿತ್ಯವೂ ಅಷ್ಟುದೂರ ಕಳುಹಿಸಲಾರೆ. ಏ, ಕಮಲಾ! ಆ ರೂಪಾಯಿಗಳನ್ನು ಕೊಟ್ಟು ಬರುವಂತೆ ನಿನಗೆ ಹೇಳಲಿಲ್ಲವೇ? ಕಣ್ಣು ಬಾಯಿ ಬಿಟ್ಟುಕೊಂಡು ಏನು ನೋಡುತ್ತಿರುವೆ?" ಎಂದಳು.

ಅವಳ ಕೋಪವನ್ನು ಕಂಡು ಅನ್ನಪೂರ್ಣೆಯು ''ಕೊಡುವೆನು, ಸ್ವಲ್ಪ ತಡೆ. ಒಮ್ಮೆಗೇ ಅಷ್ಟೇಕೆ ಕೋಪಗೊಳ್ಳುವೆ? ಬಿಂದೂ! ನಿನ್ನ ಮಗನು ಒಂದಿಲ್ಲದೊಂದು ದಿನ ದೊಡ್ಡವನಾಗದೆ ಹೀಗೆಯೇ ಇರುವನೇ? ಸರ್ವದಾ ಅವನನ್ನು ಕಣ್ಣು ರೆಪ್ಪೆಗಳಲ್ಲಿ ಮುಚ್ಚಿರಿಸಿಕೊಂಡು ಕಾಪಾಡಲಾಗುವುದೇ? ಯೋಚಿಸು!'' ಎಂದು ಹೇಳಿದಳು.

ಬಿಂದುವಾಸಿನಿಯು ಈ ಮಾತಿಗೆ ಉತ್ತರವನ್ನೀಯದೆ ''ಕಮಲಾ! ರೂಪಾಯಿಗಳನ್ನು ಪಂಡಿತಜೀಯವರಿಗೆ ಕೊಟ್ಟು, ಅವರ ಪಾದ-ಧೂಳಿಯನ್ನು ಮಗುವಿನ ಶಿರಸ್ಸಿನಲ್ಲಿರಿಸಿ ವಾಪಸು ಕರೆದುಕೊಂಡು ಬಾ ಪಂಡಿತಜೀಯವರಿಗೆ ಸಂಜೆಗೆ ಸ್ವಲ್ಪ ಮನೆಗೆ ಬರಲೂ ಹೇಳು ತಿಳಿಯಲಾರದವರಿಗೆ ತಿಳಿಸುವುದು ಹೇಗೆ? ಮಗು ಇನ್ನೂ ಚಿಕ್ಕವನು. ಯಾರಾದರೂ ಹೊಡೆದು-ಬಡಿದರೆ ಏನು ಮಾಡುವುದು? ಎಂದು ನಾನು ಹೇಳಿದರೆ, ಸದಾ ನೀನು ಅವನನ್ನು ಕಣ್ಣುರೆಪ್ಪೆಗಳಲ್ಲಿ ಮುಚ್ಚಿರಿಸಿ ಸಾಕುವೆಯಾ? ಎನ್ನುವರು. ಏನು ಮಾಡುವೆನು, ಏನು ಬಿಡುವೆನು, ಎಂಬ ವಿಚಾರವಾಗಿ ಸಲಹೆ ತೆಗೆದುಕೊಳ್ಳಲು ನಾನೇನೂ ಬರಲಿಲ್ಲ!" ಎಂದು ಹೇಳಿ ಉತ್ತರವನ್ನು ಸಹ ನಿರೀಕ್ಷಿಸದೆ ಅಲ್ಲಿಂದ ಹೊರಟು ಹೋದಳು.

ಆಶ್ಚರ್ಯಚಕಿತಳಾಗಿ ನಿಂತಲ್ಲಿ ನಿಂತಳು ಅನ್ನಪೂರ್ಣಾ.

ಕಮಲೆಯು ''ಸೊಸೆಯವರೇ, ಇನ್ನು ನಿಂತಿರಬೇಡಿ. ಪುನಃ ಅವರು ಬಂದು ಬಿಟ್ಟರೆ ಆಯಿತು ನಮ್ಮ ಗತಿ! ಒಂದು ಸಲ ಅವರು ಮನ

ಸ್ಸನ್ನು ನಿರ್ಧರಿಸಿದ ಬಳಿಕ, ಬ್ರಹ್ಮ ಬಂದರೂ ಅದನ್ನು ನಿಲ್ಲಿಸಲಾರರು!" ಎಂದು ಹೇಳಿದಳು.

ಅದೇ ದಿವಸ ಸಾಯಂಕಾಲ ಯಾದವ ಹುಕ್ಕಾ ಸೇದುತ್ತ ಕುಳಿತಿದ್ದ. ಅಷ್ಟರಲ್ಲಿ ಯಾರೋ ಬಾಗಿಲು ತಟ್ಟಿದ ಶಬ್ದವಾಯಿತು.

ಅಫೀಮಿನ ಮದದಿಂದ ಮೆಲ್ಲನೆ ಕಣ್ದೆರೆಯುತ್ತ ಅವನು ''ಯಾರು?'' ಎಂದು ಕೇಳಿದ.

ಕೊಠಡಿಯೊಳಕ್ಕೆ ಪ್ರವೇಶಿಸಿ, ''ಚಿಕ್ಕಸೊಸೆ ನಿಮ್ಮೊಡನೆ ಏನೋ ಹೇಳಬೇಕೆಂದು ಬಂದಿರುವಳು, ಕೇಳಿರಿ." ಎಂದಳು ಅನ್ನಪೂರ್ಣಾ.

ಯಾದವನು ಆತುರದಿಂದ 'ಬಹೂ-ರಾಣೀ ! ಏನು? ವಿಚಾರವೇನು?' ಎಂದು ಕೇಳಿದ.

ಚಿಕ್ಕ ಸೊಸೆಯನ್ನು ಅವನು ಅತ್ಯಂತ ಸ್ನೇಹ-ಪ್ರೀತಿಗಳಿಂದ ಕಾಣುತ್ತಿದ್ದ. ಅವಳು ಮಾತನಾಡಲಿಲ್ಲ. ಅವಳ ಪರವಾಗಿ ಅನ್ನಪೂರ್ಣೆಯು '' ಮಗುವಿನ ಕಣ್ಣಿನಲ್ಲಿ ಶಾಲೆಯ ಹುಡುಗರು ಲೇಖನಿಯನ್ನು ಚುಚ್ಚಿಬಿಟ್ಟಾರೆಂಬ ಭಯ ಆಕೆಗೆ. ಆದ್ದರಿಂದ ಮನೆಯಲ್ಲೇ ಒಂದು ಶಾಲೆಯನ್ನು ತೆರೆಯಬೇಕಂತೆ.'' ಎಂದು ತಿಳಿಸಿದಳು.

ಯಾದವ ಕೈಯಲಿದ್ದ ಹುಕ್ಕಾ ಬಿಸುಟು, ಗಾಬರಿಯಿಂದ ''ಮಗುವಿನ ಕಣ್ಣನ್ನು ಯಾರು ಚುಚ್ಚಿದರು? ಎಲ್ಲಿ ಮಗು? ಏನಾಯಿತು ನೋಡೋಣ!" ಎಂದು ಕೇಳಿದ.

ಅನ್ನಪೂರ್ಣೆಯು ನಗುತ್ತ 'ಇನ್ನೂ ಯಾರೂ ಚುಚ್ಚಿಲ್ಲ, 'ಚುಚ್ಚಿದರೆ' ಎಂಬ ವಿಚಾರವಾಗಿ ಚರ್ಚೆ ನಡೆಯುತ್ತಿದೆ.'' ಎಂದಳು.

ಯಾದವನು ಸ್ಥಿರಸ್ವರದಿಂದ '' ಓಹೋ ! 'ಚುಚ್ಚಿದರೆ' ಎಂಬ ವಿಚಾರವೋ ? ಆದರೆ ನಾನೇನೋ ಬಹುಶಃ ಯಾರೋ—'' ಎಂದ.

ಬಿಂದುವಾಸಿನಿಯು ಬಾಗಿಲಹಿಂದೆ ನಿಂತು ಕೋಪದ ಕಿಡಿಗಳನ್ನು ಕಾರುತ್ತಿದ್ದಳು. ಮೆಲ್ಲಗೆ ಅವಳು ''ಅಕ್ಕಾ, ಪ್ರಪಂಚಕ್ಕೆ ವಿರುದ್ಧವಾದ ಇಂಥ ಮಾತುಗಳನ್ನು ಹೇಳಲಾರನೆಂದು ಆಗ ನೀವು ತಿಳಿಸಿದಿರಲ್ಲವೇ ? ಈಗೇಕೆ ಹೇಳಲು ಬಂದಿರಿ ?'' ಎಂದು ಕೇಳಿದಳು.

ಅನ್ನ ಪೂರ್ಣೆಯು ತಾನು ಆ ರೀತಿ ಹೇಳಿದುದು ತಪ್ಪಾಯಿತೆಂದೂ, ಅದರ ಪರಿಣಾಮವು ಒಳ್ಳೆಯದಾಗುವುದಿಲ್ಲವೆಂದೂ ಮೊದಲೇ ತಿಳಿದು ಕೊಂಡಿದ್ದಳು. ಅಂತೆಯೇ ಈ ಮೆಲು-ಧ್ವನಿಯ ಗೂಢ ಅರ್ಥವು ಸ್ಪಷ್ಟವಾಗಿ ಹೃದಯಂಗಮವಾಗಲು ಅವಳು ವಾಸ್ತವವಾಗಿಯೂ ಹೆದರಿದಳು. ಒಂದು ಬಗೆಯಿಂದ ಆಕೆಗೆ ಕೋಪವೂ ಉಂಟಾಯಿತು. ನಿರಪರಾಧಿಯಾದ ಪತಿಯ ಮೇಲೆ ಆ ಕೋಪವನ್ನು ತೋರುತ್ತ, ಅವಳು "ಅಫೀಮಿನ ಮತ್ತಿನಿಂದ ಮನುಷ್ಯನ ಕಣ್ಣುಗಳು ಮುಚ್ಚುವುದೇನೋ ಸಹಜ; ಆದರೆ ಕಿವಿಗಳೂ ಮುಚ್ಚಿ ಹೋಗುವುವೇನು? ನಾನು ಹೇಳಿದುದೇನು? ನೀವು ಕೇಳಿದುದೇನು?—ಎಲ್ಲಿ, ನೋಡೋಣವಂತೆ!—ಮಗುವಿನ ಕಣ್ಣನ್ನು ಚುಚ್ಚಿ ಬಿಟ್ಟರೆಂದು ನಾನು ನಿಮಗೆ ಹೇಳಿದೆನೇ? ನನಗೆ ನಾನಾ ರೀತಿಯಿಂದಲೂ ತೊಂದರೆ!" ಎಂದಳು.

ಯಾದವನಿಗೆ ಅಫೀಮಿನ ಮದವು ಇಳಿಯುತ್ತ ಬಂದಿತು. ಅವನು ಕಿಂಕರ್ತವ್ಯ ವಿಮೂಢನಾಗಿ "ಏಕೆ? ಏನಾಯಿತು?" ಎಂದು ಕೇಳಿದ.

ಅನ್ನಪೂರ್ಣೆಯು ಕೋಪದಿಂದ "ಆಗುವುದೇನು? ಒಳ್ಳೆಯದೇ ಆಯಿತು! ಇಂತಹ ಮನುಷ್ಯರೊಡನೆ ಮಾತನಾಡುವುದೇ ತಪ್ಪು,—ನನ್ನ ಕರ್ಮಫಲ—" ಎಂದು ಕೊಠಡಿಯಿಂದ ಹೊರಟುಹೋದಳು.

ಯಾದವನು "ಬಹೂ-ರಾಣೀ, ಏನಾಯಿತು? ಸ್ವಲ್ಪ ವಿಸ್ತಾರವಾಗಿ ಹೇಳಮ್ಮಾ!" ಎಂದ.

ಬಿಂದುವಾಸಿನಿಯು ಬಾಗಿಲ ಮರೆಯಲ್ಲಿ ನಿಂತು ಮೆಲ್ಲನೆ "ಮನೆಯ ಹೊರಗಡೆಯಲ್ಲೇ ಒಂದು ಪಾಠಶಾಲೆಯು ಆಗುವಂತಿದ್ದರೆ—" ಎಂದಳು.

ಯಾದವನು "ಇದೇನು ದೊಡ್ಡ ವಿಷಯ? ಆದರೆ ಅಲ್ಲಿ ಪಾಠ ಹೇಳಿ ಕೊಡುವವರಾರು?" ಎಂದು ಕೇಳಿದ.

"ಪಂಡಿತಜೀಯವರು ಬಂದಿದ್ದರು,— ಅವರಿಗೆ ತಿಂಗಳಿಗೆ ಹತ್ತು ರೂಪಾಯಿಗಳು ದೊರಕುವಂತಿದ್ದರೆ ತಮ್ಮ ಪಾಠಶಾಲೆಯನ್ನು ಇಲ್ಲಿಗೇ ಬದಲಾಯಿಸುವರು. ನನ್ನ ಬಡ್ಡಿಯ ಹಣದಿಂದ ಈ ಖರ್ಚನ್ನು ಕೊಟ್ಟರಾಯಿತು" ಎಂದಳು ಬಿಂದೂ.

ಯಾದವನು ಸಂತುಷ್ಟನಾಗಿ "ಒಳ್ಳೆಯದು, ನಾಳೆ ನಾನು ಎಲ್ಲ ವನ್ನೂ ವಿಚಾರಿಸುವೆನು. ಗಂಗಾರಾಮ ಪಂಡಿತರು ತಮ್ಮ ಪಾಠಶಾಲೆ ಯನ್ನು ಇಲ್ಲಿಗೇ ಬದಲಾಯಿಸುವ ಹಾಗಿದ್ದರೆ ಮತ್ತೂ ಒಳ್ಳೆಯದೇ ಆಯಿತು" ಎಂದ.

ಭಾವನವರ ಭರವಸೆಯಿಂದ ಬಿಂದುವಾಸಿನಿಯ ಕೋಪವು ಶಾಂತ ವಾಯಿತು. ಅವಳು ನಗುಮುಖದಿಂದ ಅಡಿಗೆಯ ಮನೆಯನ್ನು ಪ್ರವೇಶಿಸಿ ನೋಡಲಾಗಿ ಅನ್ನಪೂರ್ಣೆಯು ಮುಖ ಗಂಟಿಕ್ಕಿಕೊಂಡು ಕುಳಿತಿದ್ದಳು. ಅವಳ ಬಳಿಯಲ್ಲೇ ಕುಳಿತು ಕಮಲೆಯು ಕೈ-ಬಾಯಿಗಳನ್ನು ತಿರುಗಿಸುತ್ತ ಏನೋ ಹೇಳುತ್ತಿದ್ದಳು. ಬಿಂದುವಾಸಿನಿಯು ಬಂದುದನ್ನು ಕಂಡು "ಅಬ್ಬಬ್ಬ ಎಂತಹ—" ಎಂದು ಹೇಳಿ ಅವಳು ಮಾತನ್ನು ಮುಗಿಸಿದಳು. ತನ್ನ ಮಾತನ್ನೇ ಹೇಳುತ್ತಿರಬೇಕೆಂದು ಬಿಂದುವಾಸಿನಿಯು ತಿಳಿದು ಕೊಂಡಳು. ಅವಳು ಮುಂದೆ ಬಂದು "ಅಬ್ಬಬ್ಬ ಏನು? ಹೇಳಬೇಕಾದು ದನ್ನು ಹೇಳಮ್ಮಾ! ಏಕೆ ನಿಲ್ಲಿಸಿದೆ?" ಎಂದಳು.

ಕಮಲೆಯು ಕಕ್ಕಾಬಿಕ್ಕಿಯಾದಳು. ಅವಳು ತೊದಲುತ್ತ ತೊದ ಲುತ್ತ "ಏ....ನೂ....ಇ....ಲ್ಲ...., ಅದೇ... ಅಕ್ಕನವರು ... ಹೇ....ಳಿ....ದ ರ....ಲ್ಲಾ....ಆ...." ಎಂದಳು.

ಬಿಂದುವಾಸಿನಿಯು ಕೋಪದ ಧ್ವನಿಯಲ್ಲಿ "ಹೌದು, ಹೇಳಿದ್ದರು. ಇಲ್ಲಿ ನಿಲ್ಲಬೇಡ, ನಡೆ! ನಿನ್ನ ಕೆಲಸ ನೋಡು!" ಎಂದು ಗದರಿಸಿದಳು.

ಕಮಲೆಯು ಮರು ಮಾತಾಡದೆ ಅಲ್ಲಿಂದ ತಪ್ಪಿಸಿಕೊಂಡು ಓಡಿದಳು.

ಆಗ ಬಿಂದುವಾಸಿನಿಯು ಅನ್ನಪೂರ್ಣೆಯೊಡನೆ "ದೊಡ್ಡ ಯಜ ಮಾನಿಗೂ* ಸಲಹೆಗಾರರು ಅನೇಕರಿರುವಂತೆ ತೋರುತ್ತದೆ! ಭಾವನವರಿಗೆ ಹೇಳಿ ಅವರ ಸಂಬಳವನ್ನು ಹೆಚ್ಚಿಸಬೇಕು, ಪಾಪ!" ಎಂದಳು.

ಅನ್ನಪೂರ್ಣೆಯು ಕೃದ್ಧಳಾಗಿ "ಹೋಗು, ಈಗಲೇ ಹೋಗಿ ಹೇಳಿ ಬಾ. ನಿಮ್ಮ ಭಾವನವರು ನನ್ನ ತಲೆ ಕತ್ತರಿಸಿಹಾಕಿ ಬಿಡುವರೇ? ಹುಂ!

* ಬಿಂದುವು ಸಂತೋಷದಿಂದಿರುವಾಗ ಅನ್ನಪೂರ್ಣೆಯನ್ನು "ಅಕ್ಕ" ಎನ್ನು ವಳು ಮತ್ತು ಕೋಪದಿಂದಿರುವಾಗ "ದೊಡ್ಡ ಯಜಮಾನಿ" ಎನ್ನುವಳು.

ಅವರೇನು ಕಡಿಮೆಯಾದವರೆ! ನೀನು ಹೇಳಿದೊಡನೆಯೇ ‘ ಏನು ಬಹೂ-ರಾಣಿ! ಏನು ಹೇಳಿದೆ? ಹೌದು, ಹೌದು, ನೀನು ಹೇಳುವುದು ಸರಿ!’ ಎಂದು ಆರಂಭಿಸಿಬಿಡುವರು. ನಾನು ಎಷ್ಟೆಷ್ಟೋ ಅದೃಷ್ಟಗಳನ್ನು ನೋಡಿ ರುವೆನಃ ಬಿಂದೂ. ಆದರೆ ನಿನ್ನಂತಹ ಉತ್ತಮ ಅದೃಷ್ಟವನ್ನು ಎಲ್ಲೂ ನೋಡಲಿಲ್ಲ. ಏನು ಭಾಗ್ಯವೋ ನಿನ್ನದು! ಮನೆಯುವರೆಲ್ಲರೂ ನಿನ್ನನ್ನು ಕಂಡರೆ ಹೆದರುವರು!’’ ಎಂದಳು.

ಅನ್ನಪೂರ್ಣೆಯ ಈ ಮಾತಿನ ರೀತಿಯನ್ನು ನೋಡಿ ಬಿಂದುವಾಸಿನಿಯ ಕೋಪವೆಲ್ಲ ಮಾಯವಾಯಿತು. ಅವಳು ನಗಲಾರಂಭಿಸಿದಳು. ‘‘ ನೀವು ಹೆದರುವುದಿಲ್ಲವಲ್ಲ ?’’ ಎಂದಳು.

ಅನ್ನಪೂರ್ಣೆಯು ‘‘ ನಾನು ಹೆದರುವುದಿಲ್ಲವೆ? ನಿನ್ನ ರಣಚಂಡಿಕಾ ಮೂರ್ತಿಯನ್ನು ಕಂಡು ಶರೀರದ ರಕ್ತವೆಲ್ಲ ಕರಗಿ ನೀರಾಗಿ ಹೋಗುವುದು. ನಿನಗೆ ಹೆದರದವರುಂಟೆ? ಆದರೆ ಬಿಂದೂ! ಇಷ್ಟು ಕೋಪ ಒಳ್ಳೆಯದಲ್ಲ! ಇನ್ನೂ ನೀನು ಅರಿಯದವಳೇ? ಚಿಕ್ಕವಳೇ? ಇದುವರೆಗೂ ಮಕ್ಕಳಾಗಿದ್ದರೆ ನಾಲ್ಕಾರು ಮಕ್ಕಳ ತಾಯಿಯಾಗುತ್ತಿದ್ದೆ. ದೋಷವು ಕೇವಲ ನಿನ್ನದಲ್ಲ, ಅವರದು; ನಿನ್ನನ್ನು ಮುದ್ದಿಸಿ, ಪ್ರೀತಿಸಿ ತಲೆಯ ಮೇಲೆ ಕುಳ್ಳಿರಿಸಿಕೊಂಡುದು ಅವರ ತಪ್ಪು!” ಎಂದಳು.

ಬಿಂದುವಾಸಿನಿಯು ‘‘ನಾನು ಅದೃಷ್ಟವಂತೆಯೆಂದು ನೀವು ಹೇಳಿದ ಮಾತನ್ನು ಒಪ್ಪುವೆನು. ಅಕ್ಕ! ಧನ-ದೌಲತ್ತು, ಪ್ರೀತಿ-ಪ್ರೇಮ-- ಇವು ದೊರಕುವುದೇನೂ ಅತಿಶಯವಲ್ಲ. ಆದರೆ ಇಂತಹ ದೇವರಿಗೆ ಸಮಾನರಾದ ಭಾವನವರು ದೊರಕಬೇಕಾದರೆ ಅನೇಕ ಜನ್ಮಗಳಲ್ಲಿ ತಪಸ್ಸು ಮಾಡಿರಬೇಕು! ನನ್ನ ಅದೃಷ್ಟ ಒಳ್ಳೆಯದು. ಅಕ್ಕ! ಅಸೂಯೆಪಟ್ಟು ಫಲವೇನು? ಅವರ ಪ್ರೀತ್ಯಾದರಗಳಿಂದ ನನ್ನ ತಲೆ ತಿರುಗಲಿಲ್ಲ; ಹಾಗೆ ನನ್ನ ತಲೆ ತಿರುಗಿದ್ದಪಕ್ಷಕ್ಕೆ ಅದು ನಿಮ್ಮ ಕಾರಣದಿಂದಲೇ!” ಎಂದಳು.

ಅನ್ನಪೂರ್ಣೆಯು ಕೈಕೈ ಹಿಸುಕಿಕೊಳ್ಳುತ್ತ ‘‘ನನ್ನ ಕಾರಣದಿಂದಲೇ? ನನ್ನ ಶಾಸನವೇನೋ ಕಠಿಣವಾದುದು. ಆದರೆ ಅದೃಷ್ಟವು ದುರದೃಷ್ಟ! ನನ್ನ ಅಧಿಕಾರವನ್ನು ಕೇಳುವವರೇ ಇಲ್ಲ—ಆಳುಮಕ್ಕಳು ಸಹ ಎದುರೆದು

ರಿಗೇ ಜಗಳವಾಡುವರು. 'ಅವರೇ ಯಜಮಾನರು, ನಾನೇ ದಾಸಿ' ಎಂದು ಭಾವಿಸುವರು. ನಾನಾಗುವ ಹೊತ್ತಿಗೆ ಸಹಿಸಿಕೊಂಡಿರುವೆನು. ಇನ್ನಾರಾದರೂ ಆಗಿದ್ದರೆ—" ಎಂದಳು.

ಅನ್ನಪೂರ್ಣೆಯು ಈ ಮಾತುಗಳನ್ನು ಕೇಳಿ ಬಿಂದುವು ಕಿಲಕಿಲನೆ ನಕ್ಕಳು. ಅವಳು "ಅಕ್ಕ, ನೀವು ಸತ್ಯಯುಗದವರು! ಸಾಯುವುದಕ್ಕಾಗಿ ಈ ಯುಗದಲ್ಲೇಕೆ ಹುಟ್ಟಿದಿರಿ? ಆದಿರಲಿ, ನನ್ನೊಡನೆ ಯಾರೂ ಜಗಳವಾಡುವುದೇ ಇಲ್ಲವಲ್ಲ?" ಎನ್ನುತ್ತ ಅನ್ನಪೂರ್ಣೆಯ ಮುಂದೆ ಮೊಣಕಾಲೂರಿ ಕುಳಿತು, ತನ್ನ ಎರಡೂ ತೋಳುಗಳಿಂದ ಅವಳನ್ನು ತಬ್ಬಿಕೊಂಡು "ಅಕ್ಕ, ಯಾವುದಾದರೂ ಕಥೆ ಹೇಳುವುದಿಲ್ಲವೇ?" ಎಂದಳು.

ಅನ್ನಪೂರ್ಣೆಯು ಕ್ರೋಧದಿಂದ "ನಡೆ, ದೂರ ಹೋಗು!" ಎಂದಳು.

ಅಷ್ಟರಲ್ಲಿ ಕಮಲೆಯು ಓಡಿಬಂದು "ಅಮೂಲ್ಯನು ಈಳಿಗೆಮಣೆಯಿಂದ ಕೈ ಕತ್ತರಿಸಿಕೊಂಡು ಬಹಳವಾಗಿ ಅಳುತ್ತಿರುವನು" ಎಂದಳು.

ಬಿಂದುವಾಸಿನಿಯು ಅನ್ನಪೂರ್ಣೆಯ ಕಂಠದಿಂದ ತನ್ನ ಕೈಗಳನ್ನು ತೆಗೆದು ಎದ್ದು ನಿಂತು "ಅವನಿಗೆ ಈಳಿಗೆಮಣೆ ಎಲ್ಲಿಂದ ಸಿಕ್ಕಿತು? ನೀವೆಲ್ಲರೂ ಎಲ್ಲಿ ಹಾಳಾಗಿ ಹೋಗಿದ್ದಿರಿ?" ಎಂದಳು.

ನಾನು ಆ ರೂಮಿನಲ್ಲಿ ಹಾಸಿಗೆ ಹಾಸುತ್ತಿದ್ದೆ. ಯಾವಾಗ ಒಳಗೆ ಹೋಗಿ... ...."

"ಸಾಕು, ನಿಲ್ಲಿಸು; ಎಲ್ಲಾ ತಿಳಿಯಿತು, ದೂರ ನಡೆ!" ಎನ್ನುತ್ತ ಬಿಂದುವಾಸಿನಿಯು ಅಲ್ಲಿಂದ ಹೊರಟುಹೋದಳು. ಸ್ವಲ್ಪ ಹೊತ್ತಿನನಂತರ ಮಗುವಿನ ಕೈಗೆ ಒದ್ದೆಯ ಬಟ್ಟೆಯನ್ನು ಸುತ್ತಿ, ಕಂಕುಳಲ್ಲೆತ್ತಿಕೊಂಡು ಅನ್ನಪೂರ್ಣೆಯ ಬಳಿಗೆ ಬಂದು ಎಂದಳು "ಅಕ್ಕ! ನಾನೆಷ್ಟು ದಿನಗಳಿಂದ ನಿಮಗೆ ಹೇಳುತ್ತಿರುವೆನು? ಮಕ್ಕಳು-ಮರಿಗಳು ಇರುವ ಮನೆ. ಈಳಿಗೆ ಮಣೆ, ಚಾಕು ಮುಂತಾದುವುಗಳನ್ನು ಸ್ವಲ್ಪ ಎತ್ತರದಲ್ಲಿ ಎಟುಕದಂತೆ ಇರಿಸಿರಿ ಎಂದು—ಅಷ್ಟಾದರೂ—"

ಅನ್ನಪೂರ್ಣೆಯ ಕೋಪವು ಮಿತಿಮೀರಿತು. ಅವಳು "ಆಧಾರವಿಲ್ಲದ

ಎಂತಹ ಮಾತುಗಳನ್ನಾಡುವೆ? ನಿನ್ನ ಮಗನು ಬಂದು ಕೈ ಕತ್ತರಿಸಿ ಕೊಳ್ಳುವನೆಂದು ತಿಳಿದು ಈಳಿಗೆಮಣೆಯನ್ನು ಕಬ್ಬಿಣದ ಪೆಟ್ಟಿಗೆಯಲ್ಲಿರಿಸಲೇ? ಸರಿ!" ಎಂದಳು.

''ನಾಳೆಯಿಂದ ಅವನನ್ನು ಹಗ್ಗದಿಂದ ಕಟ್ಟಿಹಾಕುವೆನು. ಆಗ ನಿಮ್ಮ ಕೊಠಡಿಗೆ ಬರುವುದಿಲ್ಲ'' ಎನ್ನುತ್ತ ಬಿಂದುವಾಸಿನಿಯು ಹೊರಟು ಹೋದಳು.

''ಕೇಳಿದೆಯಾ ಕಮಲಾ, ಇವಳ ದರ್ಪದ ಮಾತುಗಳನ್ನು! ಸ್ವಲ್ಪ ಕೇಳು, ಈಳಿಗೆಮಣೆಯನ್ನು ಎಲ್ಲರೂ ಪೆಟ್ಟಿಗೆಯಲ್ಲಿ ಮುಚ್ಚಿಡುವರೇ?'' ಎಂದಳು ಅನ್ನಪೂರ್ಣಾ.

ಕಮಲೆಯು ಏನು ಹೇಳಬೇಕೆಂದಿದ್ದಳೋ! ಬಾಯಿ ತೆರೆದವಳು ಹಾಗೆಯೇ ಸುಮ್ಮನಾದಳು.

ಬಿಂದುವಾಸಿನಿಯು ಹಿಂತಿರುಗಿ ಬಂದು ''ಅಕ್ಕ, ಇನ್ನೆಂದಾದರೂ ನೀವು ಆಳುಮಕ್ಕಳನ್ನು ಈ ರೀತಿ ಮಧ್ಯಸ್ಥಿಕೆಗೆ ಕರೆದುದಾದರೆ, ಖಂಡಿತವಾಗಿಯೂ ನಾನು ಮಗುವನ್ನು ಸಂಗಡ ಕರೆದುಕೊಂಡು ನಮ್ಮ ತಾಯಿಯ ಮನೆಗೆ ಹೊರಟು ಹೋಗುವೆನು" ಎಂದು ಹೇಳಿಬಿಟ್ಟಳು.

ಅನ್ನಪೂರ್ಣೆಯು ಸಿಟ್ಟಿನಿಂದ ''ಹೋಗು, ಈಗಲೇ ಹೋಗು! ತಲೆ ಚಚ್ಚಿಕೊಂಡು ಸತ್ತರು ಸಹ ಒಂದು ಬಾರಿಯೂ ಹೆಸರು ಹಿಡಿದು ಕೂಗುವುದಿಲ್ಲ; ಚೆನ್ನಾಗಿ ನೆನಪಿನಲ್ಲಿಡು!'' ಎಂದಳು.

''ನಾನು ಬರುವುದೂ ಇಲ್ಲ!'' ಎನ್ನುತ್ತಾ ಬಿಂದುವು ಹೊರಟು ಹೋದಳು.

ಸುಮಾರು ಎರಡು ಘಂಟೆಗಳ ನಂತರ ಅನ್ನಪೂರ್ಣೆಯು ಧಡಧಡನೆ ಮೆಟ್ಟಿಲನ್ನು ಹತ್ತಿ ಬಿಂದುವಿನ ಕೊಠಡಿಗೆ ಹೋದಳು. ಕೊಠಡಿಯ ಒಂದು ಮೂಲೆಯಲ್ಲಿಟ್ಟ ಮೇಜಿನ ಬಳಿ ಕುಳಿತು ಮಾಧವಚಂದ್ರನು ಮೊಕದ್ದಮೆಯ ಕಾಗದ-ಪತ್ರಗಳನ್ನು ನೋಡುತ್ತಿದ್ದ; ಮತ್ತು ಬಿಂದುವು ಅಮೂಲ್ಯನೊಡನೆ ಮಂಚದ ಮೇಲೆ ಮಲಗಿ ಮೆಲ್ಲಮೆಲ್ಲನೆ ಅವನಿಗೆ ಕಥೆ ಹೇಳುತ್ತಿದ್ದಳು.

ಅನ್ನಪೂರ್ಣೆಯು ''ಬಾ, ಊಟ ಮಾಡು" ಎಂದಳು.

''ನನಗೆ ಹಸಿವು ಇಲ್ಲ" ಎಂದಳು ಬಿಂದೂ.

ಮಗುವು ತನ್ನ ಚಿಕ್ಕಮ್ಮನನ್ನು ಬಾಚಿ ಅಪ್ಪಿಕೊಂಡು "ಚಿಕ್ಕಮ್ಮ ಊಟ ಮಾಡುವುದಿಲ್ಲ, ನೀನು ಹೋಗು'' ಎಂದಿತು.

ಅನ್ನಪೂರ್ಣೆಯು ಮಗುವನ್ನು ಗದರಿಸುತ್ತ ''ಈ ಹುಡುಗನೇ ಎಲ್ಲ ಜಗಳಕ್ಕೂ ಕಾರಣ. ಬಿಂದೂ, ಈಗಿನಿಂದ ಅವನನ್ನು ಮುದ್ದಿಸುತ್ತ ತಲೆಗೇರಿಸುತ್ತ ಹೋಗು, ಎಂದರೆ ಬಳಿಕ ಗೊತ್ತಾಗುವುದು. ಆಗ ಪಶ್ಚಾತ್ತಾಪ ಪಡುವೆ. ಅಕ್ಕ ಹೇಳಿದ್ದಳೆಂದು ನೆನೆಸಿಕೊಳ್ಳುವೆ'' ಎಂದಳು.

ಬಿಂದುವು ಪಿಸಪಿಸನೆ ಮಗುವಿಗೆ ಹೇಳಿಕೊಟ್ಟಳು, ಅವನು ಜೋರಾಗಿ ನೀನು ಹೋಗು ಅಕ್ಕ ! ಚಿಕ್ಕಮ್ಮ ರಾಣಿಯ ಕಥೆ ಹೇಳುತ್ತಿರುವಳು" ಎಂದ.

ಅನ್ನಪೂರ್ಣೆಯು ಗದರಿಸಿ, ''ಒಳ್ಳೆಯ ಮಾತಿನಲ್ಲಿ ಎದ್ದು ಬಾ ಬಿಂದೂ! ಇಲ್ಲದಿದ್ದರೆ ನೋಡು, ನಾಳೆ ನಿಮ್ಮಿಬ್ಬರನ್ನೂ ಕಳುಹಿಸದಿದ್ದರೆ ನನ್ನ ಹೆಸರಲ್ಲ ! ಎಂದು ಹೇಳುತ್ತಾ, ಬರುವಾಗ ಬಂದಂತೆಯೇ ಧಡಧಡನೆ ಇಳಿದುಹೋದಳು.

''ಪುನಃ ಈ ದಿವಸ ಏನು ನಿಮ್ಮದು ?'' ಎಂದ ಮಾಧವ.

''ಏನು ? ಅಕ್ಕನವರಿಗೆ ಕೋಪ ಬಂದರೆ ಏನಾಗುವುದೋ ಅದು ! ಮಕ್ಕಳು-ಮರಿಗಳು ಇರುವ ಮನೆ ; ಈಳಿಗೆಮಣೆ, ಚಾಕು ಮುಂತಾದುವನ್ನು ಸ್ವಲ್ಪ ಜಾಗರೂಕತೆಯಿಂದ ಎತ್ತಿರಿಸಬೇಕು ಎಂದುದೇ ನನ್ನ ಸರ್ವಾಪರಾಧವಾಯಿತು. ಇದಕ್ಕಾಗಿ ಇಷ್ಟು ಜಗಳ" ಎಂದಳು ಬಿಂದೂ.

''ಈಗ ಇನ್ನು ಹೆಚ್ಚು ಗಲಾಟೆ ಮಾಡಬೇಡ, ಹೋಗು, ಅತ್ತಿಗೆಯು ನಡೆಯುತ್ತಿರುವ ಧಡಧಡ ಶಬ್ದದಿಂದ ಅಣ್ಣನಿಗೆ ಎಚ್ಚರವಾದೀತು, ನಡೆ" ಎಂದ ಮಾಧವ.

ಬಿಂದುವಾಸಿನಿಯು ಮಗುವನ್ನೆತ್ತಿಕೊಂಡು ನಗುತ್ತ ಅಡಿಗೆಯ ಮನೆಗೆ ಹೋದಳು.

೩

ಒಬ್ಬಳೇ ತಾಯಿಯ ಎರಡು ಮಕ್ಕಳು ತಮ್ಮ ತಾಯಿಯ ಆಶ್ರಯದಲ್ಲಿ ಬೆಳೆದು ದೊಡ್ಡವರಾಗುವಂತೆ, ಈ ಇಬ್ಬರು ತಾಯಿಯರು ಒಬ್ಬನೇ ಮಗನ ಆಶ್ರಯದಲ್ಲಿ ಮತ್ತೆ ಆರು ವರ್ಷಗಳನ್ನು ಕಳೆದರು. ಅಮೂಲ್ಯನು ಈಗ ದೊಡ್ಡವನಾಗಿರುವನು. ಅವನು ಎಂಟ್ರೆನ್ಸ್ (Entrance) ಕ್ಲಾಸಿನಲ್ಲಿ ಓದುತ್ತಿರುವನು. ಮನೆಯಲ್ಲಿ ಪಾಠ ಹೇಳಲು ಮಾಸ್ಟರನ್ನು ಗೊತ್ತುಮಾಡಲಾಗಿದೆ. ಅವರುಬೆಳಿಗ್ಗೆ ಬಂದು ಪಾಠ ಹೇಳಿ ಹೋಗಿದ್ದರು. ಆಗ-ತಾನೆ ಅಮೂಲ್ಯ ತಿರುಗಾಡಲಿಕ್ಕೆಂದು ಹೊರಗೆ ಹೊರಟಿದ್ದ. ಭಾನುವಾರ-ವಾದುದರಿಂದ ಸ್ಕೂಲಿರಲಿಲ್ಲ.

ಅನ್ನಪೂರ್ಣೆಯು ಬಿಂದುವಾಸಿನಿಯ ಬಳಿಗೆ ಬಂದು "ಬಿಂದೂ ಏನು ಮಾಡಲಿ ಹೇಳು" ಎಂದು ಕೇಳಿದಳು.

ಬಿಂದುವಾಸಿನಿಯು ಅಲಮಾರಿನಲ್ಲಿದ್ದ ಬಟ್ಟೆಗಳನ್ನೆಲ್ಲಾ ಕೆಳಗೆ ಹರಡಿ ಅಮೂಲ್ಯನಿಗೆ ಉಡಿಸುವುದಕ್ಕಾಗಿ ಉಡುಪನ್ನು ಹುಡುಕುತ್ತಿದ್ದಳು. ಈ ದಿವಸ ಅವನು ತನ್ನ ಚಿಕ್ಕಪ್ಪನೊಂದಿಗೆ ಒಬ್ಬ ಸಾಹುಕಾರ ಕಕ್ಷಿಗಾರನ ಮನೆಗೆ ಭೋಜನಕ್ಕೆ ಹೋಗುವನು. ಬಿಂದುವು ತಲೆಯನ್ನೆತ್ತದೆ ಹಾಗೆಯೇ "ಏನು ಹೇಳಲಿ ಅಕ್ಕ!" ಎಂದು ಉತ್ತರವಿತ್ತಳು.

ಅವಳ ಮಾತಿನ ರೀತಿಯಲ್ಲಿ ಸ್ವಲ್ಪ ಅಪ್ರಸನ್ನತೆಯು ಕಂಡು ಬರುತ್ತಿತ್ತು. ಬಗೆ ಬಗೆಯ ಬಣ್ಣದ ಉಡುಪುಗಳನ್ನು ನೋಡಿ ಅನ್ನಪೂರ್ಣೆಯು ಚಕಿತಳಾದಳು. ಅವಳ ಧ್ಯಾನವು ಅತ್ತಕಡೆಗೆ ಇದ್ದುದರಿಂದ ಬಿಂದುವಿನ ಮುಖಭಾವವನ್ನು ಅವಳು ತಿಳಿಯಲಿಲ್ಲ. ತುಸ ಹೊತ್ತು ಹಾಗೆಯೇ ನೋಡುತ್ತ ನಿಂತಳು. ಬಳಿಕ "ಇವೆಲ್ಲಾ ಮಗುವಿನ ಉಡುಪುಗಳೇ?" ಎಂದು ಕೇಳಿದಳು.

"ಹೌದು," ಎಂದಳು ಬಿಂದೂ.

"ಎಷ್ಟು ಹಣವನ್ನು ವ್ಯರ್ಥವಾಗಿ ಖರ್ಚುಮಾಡುವೆ ಬಿಂದೂ? ಇವುಗಳಲ್ಲಿ ಒಂದು ಉಡುಪಿನ ಬೆಲೆಯಲ್ಲಿ ಬಡವರ ಮನೆಯ ಮಗುವಿನ ಒಂದು ವರ್ಷದ ಬಟ್ಟೆಗಳಾಗುವುವು." ಎಂದಳು ಅನ್ನಪೂರ್ಣಾ.

ಅನ್ನಪೂರ್ಣೆಯ ಮಾತನ್ನು ಕೇಳಿ ಬಿಂದುವಾಸಿನಿಗೆ ಸಂತೋಷವಾಗಲಿಲ್ಲ. ಆದರೂ ಸ್ವಾಭಾವಿಕವಾಗಿ ''ಆಗಬಹುದು. ಆದರೆ ಬಡವರು ಮತ್ತು ಭಾಗ್ಯವಂತರಲ್ಲಿ ಸ್ವಲ್ಪವಾದರೂ ವ್ಯತ್ಯಾಸವಿದ್ದೇ ಇರುವುದು. ಇದಕ್ಕಾಗಿ ದುಃಖಿಸುವುದೇತಕ್ಕೆ ಅಕ್ಕ !" ಎಂದಳು.

ಅನ್ನಪೂರ್ಣೆಯು '' ಸರಿಯೆ. ಆದರೆ ಎಲ್ಲಾ ವಿಚಾರಗಳಲ್ಲಿಯೂ ನಿನ್ನದು ಖರ್ಚು ಹೆಚ್ಚು!" ಎಂದಳು.

ಭೈರನು ಅಮೂಲ್ಯನನ್ನು ಹುಡುಕಲು ಹೋಗಿದ್ದ. ಒಂದು ಗಂಟೆಯ ನಂತರ ಅವನನ್ನು ಹುಡುಕಿ ಕರೆತಂದ.

'' ಇಷ್ಟು ಹೊತ್ತು ಎಲ್ಲಿದ್ದೆ ಮಗೂ !" ಎಂದು ಕೇಳಿದಳು ಬಿಂದೂ.

ಅಮೂಲ್ಯ ಮೌನದಿಂದಿದ್ದ.

'' ಆ ಕೇರಿಯ ತುಂಟಹುಡುಗರ ಸಂಗಡ ಗಿಲ್ಲಿ-ದಾಂಡು ಆಟವನ್ನು ಆಡುತ್ತಿದ್ದರು'' ಎಂದ ಭೈರ.

ಈ ಆಟವೆಂದರೆ ಬಿಂದುವಾಸಿನಿಗೆ ಬಹಳ ಭಯ. ಈ ಆಟವನ್ನು ಆಡಕೂಡದೆಂದು ಅವಳು ಅಮೂಲ್ಯನಿಗೆ ಕಟ್ಟಪ್ಪಣೆ ಮಾಡಿದ್ದಳು. ಭೈರನು ಹೇಳಿದುದನ್ನು ಕೇಳಿ ಅವಳು ''ಗಿಲ್ಲಿ-ದಾಂಡು ಆಟವನ್ನು ಆಡಬೇಡ" ಎಂದು ನಾನು ನಿನಗೆ ಎಷ್ಟುಸಲ ಹೇಳಿಲ್ಲ? ಎಂದು ಗದರಿದಳು.

ಭಯದಿಂದ ಅಮೂಲ್ಯನ ಮುಖವು ಪೆಚ್ಚಾಯಿತು. ಅವನು ''ನಾನು ಸುಮ್ಮನೆ ನಿಂತಿದ್ದೆ. ಅವರು ನನ್ನನ್ನು ಬಲಾತ್ಕಾರವಾಗಿ—" ಎಂದ.

'' ಬಲಾತ್ಕಾರವಾಗಿ ನಿನ್ನನ್ನು ಕರೆದರೇ? ಹಾಗಾದರೆ ಈಗಲೇ ಹೋಗಬೇಕಲ್ಲವೆ, ಹೋಗು. ನಂತರ ಹೇಳುವೆನು'' ಎನ್ನುತ್ತ ಬಿಂದುವಾಸಿನಿಯು ಅವನಿಗೆ ಬಟ್ಟೆ ಉಡಿಸತೊಡಗಿದಳು.

ಸುಮಾರು ಎರಡು ತಿಂಗಳ ಹಿಂದೆ ಅಮೂಲ್ಯನ ಉಪನಯನವಾಗಿತ್ತು. ಆದುದರಿಂದ ಅವನು ಗುಂಡಗಿನ ಜರತಾರಿಯ ಟೋಪಿಯನ್ನು ಹಾಕಿಕೊಳ್ಳಲು ಒಪ್ಪಲಿಲ್ಲ. ಆದರೆ ಬಿಂದುವು ಬಿಡುವಳೆಲ್ಲಿ? ಬಲಾತ್ಕಾರದಿಂದ

ಅವನಿಗೆ ಟೋಪಿಯನ್ನು ಹಾಕಿದಳು. ಗುಂಡಗಿನ ಜರತಾರಿಯ ಟೋಪಿಯನ್ನು ಹಾಕಿಕೊಂಡು ಅಮೂಲ್ಯ ಅಳತೊಡಗಿದ. ಮಾಧವನು ಅದೇ ಸಮಯಕ್ಕೆ ಸರಿಯಾಗಿ ಒಳಹೊಕ್ಕು "ಇನ್ನೂ ಎಷ್ಟು ಹೊತ್ತಾಗುವುದು?" ಎಂದು ಕೇಳಿದ.

ಮರುಕ್ಷಣವೇ ಅಮೂಲ್ಯನ ಕಡೆಗೆ ತಿರುಗಿ ನೋಡಿ ನಗುತ್ತ "ಇದೇನು, ಅವನು ಮಥುರೆಯ ಶ್ರೀಕೃಷ್ಣನೇ ಆಗಿಹೋಗಿರುವನಲ್ಲಾ!" ಎಂದ.

ಅಮೂಲ್ಯ ಅತ್ಯಂತ ಲಜ್ಜಿತನಾಗಿ, ಟೋಪಿಯನ್ನು ತೆಗೆದು ಬಿಸುಟಿ ಮಂಚದ ಮೇಲೆ ಮುಖಮುಚ್ಚಿ ಮಲಗಿಕೊಂಡ.

ಬಿಂದುವಾಸಿನಿಗೆ ಬಹಳ ಕೋಪಬಂತು, ಅವಳು ಪತಿಯನ್ನು ಕುರಿತು "ಅವನು ಮೊದಲೇ ಅಳುತ್ತಿರುವನು, ಅದರ ಮೇಲೆ ಈಗ ನೀವು ಬೇರೆ—" ಎಂದಳು.

ಮಾಧವ ಗಂಭೀರಭಾವದಿಂದ "ಅಳಬೇಡ, ಮಗೂ! ಏಳು. ಜನರು ಹುಚ್ಚನೆಂದರೆ ನನ್ನನ್ನು ಹುಚ್ಚನೆನ್ನುವರು, ನೀನು ನಡೆ" ಎಂದ.

ಹಿಂದೆ ಒಂದು ದಿನ ಇದೇ ರೀತಿ ಮಾತು ನಡೆದಿತ್ತು. ಆಗ ಬಿಂದುವು ಅತ್ಯಂತ ಕೋಪಗೊಂಡಿದ್ದಳು. ಈ ದಿನ ಪುನಃ ಅದೇ ಮಾತಿನ ಪುನರಾವೃತ್ತಿಯಿಂದ ಅವಳು ಕಿಡಿಕಿಡಿಯಾಗಿ "ಎಲ್ಲ ಕೆಲಸವನ್ನೂ ನಾನು ಹುಚ್ಚಿಯಂತೆ ಮಾಡುವೆನಲ್ಲವೇ?" ಎನ್ನುತ್ತ ಎದ್ದಳು. ಎದ್ದು ಅಮೂಲ್ಯನಿಗೆ ತೊಡಿಸಿದ್ದ ಮಖಮಲ್ಲಿನ ಉಡುಪು, ಜರತಾರಿ ಟೋಪಿ ಮುಂತಾದುದೆಲ್ಲವನ್ನೂ ಕಿತ್ತು ಎಸೆಯುತೊಡಗಿದಳು.

ಮಾಧವನು ಭಯಪಟ್ಟು, ಒಡನೆಯೇ ಅಲ್ಲಿಂದ ಹೊರಟು ಅತ್ತಿಗೆಯ ಬಳಿಗೆ ಬಂದು "ಭೂತವೋ, ಪಿಶಾಚವೋ ಹಿಡಿದಿರುವಂತಿದೆ ಆಕೆಗೆ. ಒಂದು ಸಲ ನೀವು ಹೋಗಿ ನೋಡಿರಿ, ಅತ್ತಿಗೆ!" ಎಂದ.

ಅನ್ನಪೂರ್ಣೆಯು ಕೊಠಡಿಗೆ ಬಂದು ನೋಡಿದಳು. ಬಿಂದುವಾಸಿನಿಯು ಅಮೂಲ್ಯನಿಗೆ ತೊಡಿಸಿದ್ದ ಉಡುಪುಗಳೆಲ್ಲವನ್ನೂ ಭರಭರನೆ ಬಿಚ್ಚಿ ಬಿಸಾಡುತ್ತಿದ್ದಳು. ಅಮೂಲ್ಯ ಭಯದಿಂದ ಬೆಪ್ಪಾಗಿ ನಿಂತಿದ್ದ.

ಅನ್ನಪೂರ್ಣೆಯು “ಚೆನ್ನಾಗಿ ಕಾಣಿಸುತ್ತಿತ್ತು, ಬಿಂದೂ! ಏಕೆ ಎಲ್ಲವನ್ನೂ ಬಿಚ್ಚಿದೆ?” ಎಂದು ಕೇಳಿದಳು.

ಬಿಂದುವಾಸಿನಿಯು ಮಾಡುತ್ತಿದ್ದ ಕೆಲಸವನ್ನು ಬಿಟ್ಟು, ಸೀರೆಯ ಸೆರಗನ್ನು ಕೊರಳಸುತ್ತ ಹಾಕಿಕೊಂಡು *ಕೈಜೋಡಿಸಿ ನಿಂತು “ಹಿರಿಯ ಯಜಮಾನಿಯವರೇ, ನನ್ನ ಕಣ್ಮುಂದೆ ನಿಲ್ಲದೆ ಹೊರಟುಹೋಗಿರಿ, ನಿಮ್ಮ ಕಾಲುಗಳಿಗೆ ನಮಸ್ಕರಿಸುವೆನು. ನಿಮ್ಮೆಲ್ಲರ ಮಧ್ಯಸ್ಥಿಕೆಯಿಂದ ಅವನ ಪ್ರಾಣವೇ ಹೊರಟುಹೋಗುವುದು!” ಎಂದಳು.

ಅನ್ನಪೂರ್ಣೆಯು ಸ್ತಬ್ಧಳಾಗಿ ನಿಂತಿದ್ದಳು.

ಬಿಂದುವಾಸಿನಿಯು ಅಮೂಲ್ಯನ ಕಿವಿ ಹಿಡಿದು ಅವನನ್ನು ಒಂದು ಮೂಲೆಗೆ ಎಳೆದುಕೊಂಡು ಹೋಗಿ, ಅಲ್ಲಿ ನಿಲ್ಲಿಸಿ “ನಿನ್ನ ದುಷ್ಟತನಕ್ಕೆ ತಕ್ಕ ಶಿಕ್ಷೆಯಾಗಬೇಕು. ಈ ದಿನವೆಲ್ಲಾ ಈ ರೂಮಿನಲ್ಲಿ ಬಿದ್ದಿರು, ನಡೆ! ಅಕ್ಕ, ನೀವು ಹೊರಗೆ ಬನ್ನಿರಿ. ನಾನು ಬಾಗಿಲನ್ನು ಹಾಕುವೆನು” ಎನ್ನುತ್ತ ಅವಳು ಹೊರಗೆ ಬಂದು ಬಾಗಿಲನ್ನು ಮುಚ್ಚಿ, ಚಿಲಕವನ್ನು ಹಾಕಿದಳು.

ಮಧ್ಯಾಹ್ನ ಒಂದು ಗಂಟೆಯಾಯಿತು. ಅನ್ನಪೂರ್ಣೆಗೆ ತಡೆಯಲಾಗಲಿಲ್ಲ. ಅವಳು “ಬಿಂದೂ, ನೀನು ನಿಜವಾಗಿಯೂ ಈ ದಿವಸ ಅಮೂಲ್ಯನನ್ನು ಊಟಮಾಡಗೊಡುವುದಿಲ್ಲವೇ? ಅವನಿಗಾಗಿ ಎಲ್ಲರೂ ಉಪವಾಸ ಇರುವುದು ಹೇಗೆ?” ಎಂದಳು.

“ಅದು ಅವರವರ ಇಚ್ಛೆ!” ಎಂದಳು ಬಿಂದೂ.

“ಎಂತಹ ಮಾತನ್ನಾಡುವೆ, ಬಿಂದೂ? ಮನೆಯಲ್ಲಿ ಇರುವವನು ಒಬ್ಬ ಹುಡುಗ; ಅವನು ಉಪವಾಸವಿರುವಾಗ—ನನ್ನ ನಿನ್ನ ಮಾತನ್ನು ಬಿಟ್ಟುಬಿಡು—ಆಳುಮಕ್ಕಳಾವರೂ ಹೇಗೆ ಊಟಮಾಡುವರು ನೀನೇ ಹೇಳು!” ಎಂದಳು ಅನ್ನಪೂರ್ಣೆ.

---

* ಬಂಗಾಳದ ಸ್ತ್ರೀಯರು ದೇವರಿಗಾಗಲಿ, ದೊಡ್ಡವರಿಗಾಗಲಿ ನಮಸ್ಕರಿಸುವಾಗ ಈ ರೀತಿ ಸೀರೆಯ ಸೆರಗನ್ನು ಕೊರಳಸುತ್ತ ಹಾಕಿಕೊಳ್ಳುವರು. ಇದು ವಿಶೇಷ ವಿನಯದ ಗುರುತು.

ಬಿಂದುವು ಹಟದಿಂದ "ಅದು ನನಗೆ ಗೊತ್ತಿಲ್ಲ" ಎಂದಳು.

ಅನ್ನಪೂರ್ಣೆಯು ಇನ್ನು ವಾದಿಸಿ ಪ್ರಯೋಜನವಿಲ್ಲವೆಂದು ಅರಿತಳು. ಆದರೂ ಅವಳು ಪುನಃ "ಬಿಂದೂ, ಈ ಅಕ್ಕನ ಮಾತಿಗಾದರೂ ಸ್ವಲ್ಪ ಮರ್ಯಾದೆ ಕೊಡು. ಈ ಒಂದು ದಿವಸ ಅವನನ್ನು ಕ್ಷಮಿಸು. ಅದೂ ಅಲ್ಲದೆ ಪಿತ್ತವೇರಿ ದೇಹಸ್ಥಿತಿ ಕೆಟ್ಟರೆ, ನೀನೇ ಕಷ್ಟ ಅನುಭವಿಸಬೇಕಾಗುವುದು" ಎಂದು ಹೇಳಿದಳು.

ಅಕ್ಕನು ಹೇಳಿದುದು ನಿಜವೆಂದು ಮನಸ್ಸಿನಲ್ಲೇ ತಿಳಿದು, ಬಿಂದುವು ಸ್ವಲ್ಪ ಮೆತ್ತಗಾದಳು. ಅವಳು ಕಮಲೆಯನ್ನು ಕರೆದು "ಹೋಗು, ಅಮೂಲ್ಯನನ್ನು ಕರೆದುಕೊಂಡು ಬಾ" ಎಂದು ಹೇಳಿ, ಪುನಃ ಅನ್ನಪೂರ್ಣೆಯ ಕಡೆಗೆ ತಿರುಗಿ "ಆದರೆ ಅಕ್ಕ, ಈಗಲೇ ಹೇಳಿಬಿಡುವೆನು. ಇನ್ನುಮುಂದೆ ನನ್ನ ಮಾತಿಗೆ ಯಾರಾದರೂ ಅಡ್ಡಿ ಬಂದರೆ ಅದರ ಪರಿಣಾಮವು ಒಳ್ಳೆಯದಾಗಲಿಕ್ಕಿಲ್ಲ" ಎಂದಳು.

ಜಗಳವು ಅಷ್ಟಕ್ಕೇ ನಿಂತಿತು ಆ ದಿನ.

ತಮ್ಮನು ವಕಾಲತ್ತನ್ನು ಆರಂಭಿಸಿದಂದಿನಿಂದ ಯಾದವನು ನೌಕರಿಯನ್ನು ಬಿಟ್ಟು ತನ್ನ ಜಮೀನು-ಆಸ್ತಿಗಳನ್ನು ನೋಡಿಕೊಳ್ಳತೊಡಗಿದ್ದ. ಬಿಂದುವಾಸಿನಿಯ ಹತ್ತುಸಾವಿರ ರೂಪಾಯಿಗಳನ್ನು ಬಡ್ಡಿಗೆ ಹಾಕಿ, ಒಂದಕ್ಕೆರಡಾಗಿ ಮಾಡಿದ್ದ. ಈ ಹಣದಿಂದ ಸ್ವಲ್ಪ ರೂಪಾಯಿಗಳನ್ನು ತೆಗೆದುಕೊಂಡು, ಹಾಗೂ ತಮ್ಮನ ಸಂಪಾದನೆಯ ಮೇಲೆ ಭರವಸೆ ಇರಿಸಿ, ಅವನು ಸುಮಾರು ಒಂದು ಮೈಲಿ ದೂರದಲ್ಲಿ ಒಂದು ದೊಡ್ಡ ಮನೆಯನ್ನು ಕಟ್ಟಿಸತೊಡಗಿದ್ದ. ಮನೆ ಮುಗಿದು ಆಗತಾನೇ ಹತ್ತು ದಿನಗಳಾಗಿದ್ದುವು. ದುರ್ಗಾಪೂಜೆಯಾದ ನಂತರ ಒಳ್ಳೆಯ ದಿನಸವನ್ನು ಹುಡುಕಿ, ಎಲ್ಲರೂ ಆ ಮನೆಯಲ್ಲಿ ಹೋಗಿ ಇರಬೇಕೆಂದು ನಿರ್ಧರಿಸಲಾಗಿದ್ದಿತು. ಆದುದರಿಂದ ಒಂದು ದಿನ ಊಟಮಾಡುತ್ತಿರುವಾಗ ಯಾದವನು ಬಿಂದುವನ್ನು ಕುರಿತು "ಬಹೂರಾಣೀ, ನಿನ್ನ ಮನೆಯು ಪೂರ್ತಿಯಾಯಿತು. ಇಷ್ಟರಲ್ಲೇ ಒಂದು ದಿವಸ ಹೋಗಿ ನೋಡಿ ಬಾ. ಮತ್ತೇನಾದರೂ ಮಾಡಬೇಕಾದುದಿದ್ದರೆ ತಿಳಿಸು" ಎಂದು ಹೇಳಿದ.

ಏನೇ ಕೆಲಸವಿದ್ದರೂ ಬಿಟ್ಟು ಬಂದು ಬಾಗಿಲ ಹಿಂದೆ ಕುಳಿತು, ಭಾವನವರು ಊಟಮಾಡುವಾಗ ಆಡುವ ಮಾತುಗಳನ್ನು ಕೇಳುವುದು ಬಿಂದುವಾಸಿನಿಯ ರೂಢಿಯಾಗಿಹೋಗಿತ್ತು. ಭಾವನವರಲ್ಲಿ ಅವಳಿಗೆ ಭಕ್ತಿಭಾವವಿತ್ತು. ಅಂತೆಯೇ ಎಲ್ಲರೂ ಅವನನ್ನು ಭಕ್ತಿಯಿಂದ ಕಾಣುತ್ತಿದ್ದರು. ಅವಳು "ಇನ್ನೇನೂ ಬಾಕಿ ಇಲ್ಲ" ಎಂದಳು.

ಯಾದವನು ನಕ್ಕು "ಬಹೂರಾಣೀ, ಮನೆಯನ್ನು ನೋಡುವುದಕ್ಕೆ ಮುಂಚಿತವಾಗಿಯೇ ಏನೂ ಬಾಕಿ ಇಲ್ಲವೆಂದು ಹೇಳಿಬಿಟ್ಟೆಯಾ? ಹಾಗಾದರೆ ಸರಿ! ಆದರೆ ಒಂದು ಮಾತು, ನಮ್ಮ ಆತ್ಮೀಯರು-ಸ್ವಜನರೆಲ್ಲರನ್ನೂ ಕರೆಸಿ, ಒಂದು ಶುಭದಿನವನ್ನು ಆರಿಸಿ, ಎಲ್ಲರೂ ಅಲ್ಲಿಗೆ ಹೋಗಬೇಕೆಂದು ನನ್ನ ಅಪೇಕ್ಷೆ. ಹೋಗಿ ನಂತರ ಗೃಹದೇವತೆಯ ಪೂಜೆ ಮಾಡಿಸೋಣ—ಆಗಬಹುದಲ್ಲವೇ?" ಎಂದು ಕೇಳಿದ.

ಬಿಂದುವು ಮೆಲ್ಲನೆ "ಅಕ್ಕನವರೊಡನೆ ಹೇಳುವೆನು. ಅವರು ಹೇಳಿದಂತೆ ಆಗಲಿ" ಎಂದಳು.

ಯಾದವನು "ಹೇಳು ಬಹೂರಾಣೀ! ಆದರೆ ನೀನೇ ನನ್ನ ಮನೆಯ ಲಕ್ಷ್ಮಿ. ನಿನ್ನ ಇಷ್ಟದಂತೆ ಎಲ್ಲ ಕೆಲಸಗಳೂ ನೆರವೇರುವುವು" ಎಂದ. ಅನ್ನಪೂರ್ಣೆಯು ಅಲ್ಲೇ ಕುಳಿತಿದ್ದಳು. ಅವಳು ನಕ್ಕು "ನಿಮ್ಮ ಲಕ್ಷ್ಮೀ ಬಹೂರಾಣಿಯು ಸ್ವಲ್ಪ ಶಾಂತವಾಗಿದ್ದಿದರೆ—" ಎಂದಳು.

"ಶಾಂತವಾಗಿರುವುದೇನು? ಬಹೂರಾಣಿಯು ನನ್ನ ಸಾಕ್ಷಾತ್ ಜಗದ್ಧಾತ್ರಿ! ವರವನ್ನೂ ಕೊಡುವಳು; ಸಮಯ ಬಂದಾಗ ಕತ್ತಿಯನ್ನೂ ಹಿಡಿಯುವಳು. ಹಾಗೆಯೇ ಇರಬೇಕು! ಅವಳನ್ನು ಕರೆತಂದ ನಂತರ ನನಗೆ ಈ ಮನೆಯಲ್ಲಿ ಎಳ್ಳಷ್ಟಾದರೂ ಕಷ್ಟವಾಗಲಿ, ದುಃಖವಾಗಲಿ ಇಲ್ಲ!" ಎಂದ ಯಾದವ.

ಅನ್ನಪೂರ್ಣೆಯು "ನಿಮ್ಮ ಈ ಮಾತು ನಿಜ. ಅವಳು ಇಲ್ಲಿಗೆ ಬರುವುದಕ್ಕೆ ಮುಂಚಿನ ದಿನಗಳನ್ನು ನೆನೆಸಿಕೊಂಡರೆ ಭಯವಾಗುವುದು!" ಎಂದಳು.

ಬಿಂದುವಾಸಿನಿಯು ಲಜ್ಜಿತಳಾದಳು. ಅವಳು ಆ ಮಾತನ್ನು ಮರೆಸ ಲೆಳಸಿ “ ನೀವು ಎಲ್ಲರನ್ನೂ ಕರೆಸಿರಿ. ಆ ಮನೆಯು ಬೇಕಾದಷ್ಟು ದೊಡ್ಡ ದಾಗಿದೆ. ಅಲ್ಲಿ ಯಾರಿಗೂ ಯಾವ ರೀತಿಯಿಂದಲೂ ತೊಂದರೆಯಾಗುವು ದಿಲ್ಲ. ಬೇಕಾದರೆ ಅವರೆಲ್ಲರೂ ನಾಲ್ಕಾರು ತಿಂಗಳು ಅಲ್ಲೇ ಇರಲೂ ಬಹುದು ” ಎಂದು ಹೇಳಿದಳು.

“ ಹಾಗೆಯೇ ಆಗಲಿ, ಬಹೂರಾಣೀ ! ನಾನು ನಾಳೆಯೇ ಎಲ್ಲರನ್ನೂ ಕರೆಸಲು ಏರ್ಪಾಡು ಮಾಡುವೆನು ” ಎಂದು ಹೇಳಿದ ಯಾದವ.

೪

ಯಾದವನ ಸೋದರತ್ತೆಯ ಮಗಳು ಎಲೊಕೇಶಿಯು ಬಹಳ ದರಿದ್ರಾ ವಸ್ಥೆಯಲ್ಲಿದ್ದಳು. ಯಾದವನು ಅವಳಿಗೆ ಆಗಾಗ ಆರ್ಥಿಕ ಸಹಾಯತೆಯನ್ನು ನೀಡುತ್ತಿದ್ದ. ತನ್ನ ಒಬ್ಬನೇ ಮಗನಾದ ನರೇಂದ್ರನನ್ನು ಯಾದವನ ಬಳಿಯಲ್ಲಿ ಬಿಟ್ಟು ಓದಿಸಬೇಕೆಂಬುದೇ ಅವಳ ಇಚ್ಛೆಯಾಗಿದ್ದಿತು. ಈಗ ಕೆಲವು ದಿವಸಗಳಿಂದ ಅವಳು ಪತ್ರದಲ್ಲಿ ಇದೇ ವಿಚಾರವನ್ನು ಒತ್ತಿಒತ್ತಿ ಬರೆಯುತ್ತಿದ್ದಳು. ಅಂತೆಯೇ ಒಂದು ದಿನ ಅವಳು ತನ್ನ ಪುತ್ರನೊಡನೆ ಉತ್ತರಪಾಡಾದಿಂದ ಹೊರಟುಬಂದಳು. ಅವಳ ಪತಿಯು ಯಾವ ಕೆಲಸ ದಲ್ಲಿರುವನೆಂಬುದನ್ನು ಸರಿಯಾಗಿ ಹೇಳುವಂತಿಲ್ಲ. ಎರಡು-ಮೂರು ದಿನಗಳ ನಂತರ ಅವನೂ ಹೊರಟುಬಂದ. ನರೇಂದ್ರನಿಗೆ ಸುಮಾರು ೧೬-೧೭ ವರ್ಷ. ಅವನು ದೊಡ್ಡ ಅಂಚಿನ ಪಂಚೆಯನ್ನೇ ಯಾವಾಗಲೂ ಉಡುತ್ತಿದ್ದ. ದಿನಕ್ಕೆ ಐದಾರು ಸಲವಾದರೂ ಕ್ರಾಪು ಬಾಚುತ್ತಿದ್ದ. ಅವನ ಗುಂಗುರು ಕೂದಲು ಗಳು ಅತ್ಯಂತ ಸುಂದರವಾಗಿದ್ದುವು. ಅವಳು ಊರಿಗೆ ಬಂದ ದಿನ ಸಂಜೆ ಎಲ್ಲರೂ ಅಡಿಗೆಯ ಮನೆಯ ಅಂಗಳದಲ್ಲಿ ಕುಳಿತು ಮಾತನಾಡುತ್ತಿದ್ದರು. ಎಲೊಕೇಶಿಯು ತನ್ನ ಮಗನ ಅಸಾಧಾರಣ ರೂಪ-ಗುಣಗಳನ್ನು ವರ್ಣಿಸು ತ್ತಿದ್ದಳು.

“ ನರೇಂದ್ರ, ಯಾವ ಕ್ಲಾಸಿನಲ್ಲಿ ಓದುತ್ತಿರುವೆ ಮಗೂ ? ” ಎಂದು ಕೇಳಿದಳು ಬಿಂದೂ.

ನರೇಂದ್ರ ಅವಳ ಪ್ರಶ್ನೆಗೆ ಉತ್ತರವಾಗಿ "ನಾಲ್ಕನೆಯ ಕ್ಲಾಸಿನಲ್ಲಿ. ರಾಯಲ್ ರೀಡರ್, ಗ್ರಾಮರ್, ಜಾಗ್ರಫಿ, ಅರಿಥ್‌ಮಿಟಿಕ್, ಅದೂ ಅಲ್ಲದೆ ಡೆಸಿಮಲ್-ಟ್ರೆಸಿಮಲ್ ಇನ್ನೂ ಏನೇನೋ ಇವೆ—ಅದೆಲ್ಲಾ ನಿಮಗೆ ಗೊತ್ತಾಗುವುದಿಲ್ಲ" ಎಂದ.

ಎಲೋಕೇಶಿಯು ಹೆಮ್ಮೆಯಿಂದ ತನ್ನ ಮಗನ ಮುಖದ ಕಡೆಗೆ ನೋಡಿ ಬಿಂದುವಿನೊಡನೆ "ಒಂದೆರಡು ಪುಸ್ತಕಗಳೆಂದು ತಿಳಿದಿರುವೆಯಾ ಬಿಂದೂ? ಪುಸ್ತಕಗಳ ಪರ್ವತವೇ ಎಂದು ಹೇಳಬಹುದು ನೋಡು!" ಎನ್ನುತ್ತಾ ಪುನಃ ಮಗನ ಕಡೆಗೆ ತಿರುಗಿ "ನರೇಂದ್ರ, ನಾಳೆ ಪೆಟ್ಟಿಗೆಯಿಂದ ನಿನ್ನ ಪುಸ್ತಕಗಳನ್ನೆಲ್ಲಾ ತೆಗೆದು ಇವರೆಲ್ಲರಿಗೂ ತೋರಿಸು ಮಗೂ" ಎಂದಳು.

ನರೇಂದ್ರ ತಲೆಯಲ್ಲಾಡಿಸಿ "ಹಾಗೆಯೇ ಆಗಲಿ, ತೋರಿಸುವೆನು" ಎಂದ.

"ಪರೀಕ್ಷೆ ಪಾಸ್ ಮಾಡಲು ಇನ್ನೂ ಬಹಳ ದಿನಗಳು ಬೇಕು ಅಲ್ಲವೇ?" ಎಂದು ಕೇಳಿದಳು ಬಿಂದೂ.

ಎಲೋಕೇಶಿಯು "ಬಹಳ ದಿವಸಗಳೇಕೆ ಬೇಕು? ಹಾಗಲ್ಲ, ಬಿಂದೂ! ಇದುವರೆಗೂ ಒಂದಿಲ್ಲದಿದ್ದರೆ ನಾಲ್ಕು ಪರೀಕ್ಷೆಗಳನ್ನು ಪಾಸ್ ಮಾಡುತ್ತಿದ್ದ. ಆ ಸುಡುಗಾಡು ಉಪಾಧ್ಯಾಯನ ಕಾರಣದಿಂದ ಏನೂ ಆಗುವುದಿಲ್ಲ. ಅವ ಹಾಳಾಗ! ನನ್ನ ಮಗನನ್ನು ಕಂಡರೆ ವಿಷ ಕಾರುವನು. ಮೇಲಿನ ಕ್ಲಾಸಿಗೆ ಹಾಕುವುದೇ ಇಲ್ಲ. ನನ್ನ ಕಂದನ ಮೇಲೆ ಅವನಿಗೇನು ಅಸೂಯೆಯೋ ದೇವರೇ ಬಲ್ಲ! ಅಂತೂ ವರ್ಷಾಂತರಗಳಾದರೂ ಒಂದೇ ಕ್ಲಾಸಿನಲ್ಲಿ ಹಾಕಿರುವನು" ಎಂದು ಹೇಳಿದಳು.

ಬಿಂದುವಾಸಿನಿಯು ಆಶ್ಚರ್ಯವನ್ನು ಸೂಚಿಸುತ್ತ "ಅದು ಹೇಗೆ? ಹೀಗಾಗಲು ಕಾರಣವೇ ಇಲ್ಲ" ಎಂದಳು.

ಎಲೋಕೇಶಿಯು "ಏಕೆ ಆಗುವುದಿಲ್ಲ? ನರೇಂದ್ರನ ವಿಚಾರದಲ್ಲಿ ಒಂದೇ ಸಮನೆ ಹಾಗಾಗುತ್ತಿರುವುದು. ಉಪಾಧ್ಯಾಯರೆಲ್ಲರೂ ಒಟ್ಟಿ

ಗೂಡಿ ಲಂಚವನ್ನು ಕೇಳುವರು. ನಾನು ಬಡವಳು. ಲಂಚಕ್ಕೆ ಹಣವನ್ನು ಎಲ್ಲಿಂದ ತರಲಿ, ಹೇಳು!" ಎಂದಳು.

ಬಿಂದುವಾಸಿನಿಯು ಏನೂ ಉತ್ತರ ಕೊಡದೆ ಸುಮ್ಮನಿದ್ದಳು. ಅನ್ನ ಪೂರ್ಣೆಯು ದುಃಖಿತಳಾಗಿ "ಭಲೆ, ಈ ರೀತಿ ಮನುಷ್ಯರನ್ನು ಲಂಚಕ್ಕಾಗಿ ಪೀಡಿಸುವುದು ಸಹ ಉಂಟೇ? ಇದೆಂತಹ ಒಳ್ಳೆಯ ಕೆಲಸ? ಆದರೆ ನಮ್ಮ ಊರಿನಲ್ಲಿ ಈ ರೀತಿಯೆಲ್ಲಾ ನಡೆಯುವುದಿಲ್ಲ. ನಮ್ಮ ಅಮೂಲ್ಯನು ಪ್ರತಿ ವರ್ಷವೂ ಉತ್ತಮ ಉತ್ತಮವಾದ ಪುಸ್ತಕಗಳನ್ನು ಇನಾಮಾಗಿ ಪಡೆಯುವನು. ಇಲ್ಲಿ ಲಂಚ-ಗಿಂಚ ಏನೂ ಕೊಡಬೇಕಾದುದಿಲ್ಲ! ಎಂದು ಹೇಳಿದಳು.

ಅಷ್ಟರಲ್ಲಿ ಅಮೂಲ್ಯನು ಮೆಲ್ಲನೆ ಬಂದು ಚಿಕ್ಕಮ್ಮನ ತೊಡೆಯ ಮೇಲೆ ಕುಳಿತುಕೊಂಡ. ಬಳಿಕ ತನ್ನ ಎರಡು ಕೈಗಳನ್ನೂ ಆಕೆಯ ಕೊರಳಸುತ್ತ ಹಾಕಿ ಪಿಸಪಿಸನೆ ಕಿವಿಯಲ್ಲಿ "ಚಿಕ್ಕಮ್ಮಾ! ನಾಳೆ ಭಾನುವಾರ. ಈಗ ಮಾಸ್ಟರು ಬಂದಿರುವರು. ಈಪೊತ್ತು ಒಂದು ದಿನ ಪಾಠ ಬೇಡವೆಂದು ಹೇಳು" ಎಂದು ಹೇಳಿದ.

ಬಿಂದುವಾಸಿನಿಯು ನಗುತ್ತ "ನೋಡಿದಿರಾ, ಈ ಹುಡುಗನನ್ನು! ಕಥೆ ಎಂದರೆ ಇವನಿಗೆ ಬಹಳ ಇಷ್ಟ. ಯಾರಾದರೂ ಕಥೆ ಹೇಳಲು ಸಿಕ್ಕಿಬಿಟ್ಟರೆ ಸಾಕು, ಮೈಮೇಲೆ ಪ್ರಜ್ಞೆಯೇ ಇರುವುದಿಲ್ಲ ಎಂದು ಕಮಲೆಯ ಕಡೆಗೆ ತಿರುಗಿ "ಕಮಲಾ, ಈ ದಿನ ಅಮೂಲ್ಯನು ಪಾಠ ಹೇಳಿಸಿಕೊಳ್ಳಲು ಬರುವುದಿಲ್ಲವೆಂದು ಮಾಸ್ಟರಿಗೆ ತಿಳಿಸು" ಎಂದಳು.

ನರೇಂದ್ರ ಆಶ್ಚರ್ಯಚಕಿತನಾಗಿ "ಏನೋ, ಅಮೂಲ್ಯ! ಇಷ್ಟು ದೊಡ್ಡವನಾಗಿ ಇನ್ನೂ ಹೆಂಗುಸರ ತೊಡೆಯ ಮೇಲೆ ಕುಳಿತುಕೊಳ್ಳುವೆಯಾ?" ಎಂದು ಕೇಳಿದ.

ಬಿಂದುವಾಸಿನಿಯು ನಗುತ್ತ "ಇಷ್ಟೇ ಏಕೆ? ಇನ್ನೂ ಅವನು ರಾತ್ರಿಯ ವೇಳೆಯಲ್ಲಿ....................................." ಎಂದಳು.

ಅಮೂಲ್ಯನು ನಾಚಿಕೆಗೊಂಡು ತನ್ನ ಕೈಗಳಿಂದ ಅವಳ ಬಾಯನ್ನು ಮುಚ್ಚಿ "ಹೇಳಬೇಡ ಚಿಕ್ಕಮ್ಮಾ! ಹೇಳಬೇಡ!" ಎಂದ.

ಬಿಂದುವು ಸುಮ್ಮನಿದ್ದರೂ ಅನ್ನಪೂರ್ಣೆಯು ಸುಮ್ಮನಿರಲಿಲ್ಲ. "ಇನ್ನೂ ಏನು? ಅವನು ರಾತ್ರಿಯ ವೇಳೆಯಲ್ಲಿ ತನ್ನ ಚಿಕ್ಕಮ್ಮನ ಬಳಿ ಮಲಗಿಕೊಳ್ಳುವನು" ಎಂದು ಹೇಳಿದಳು.

ಅಮೂಲ್ಯನು ಅತ್ಯಂತ ಲಜ್ಜೆಯಿಂದ ಚಿಕ್ಕಮ್ಮನ ಮಡಿಲಲ್ಲಿ ಮುಖ ಮುಚ್ಚಿಕೊಂಡ.

ನರೇಂದ್ರನು "ಛೀ, ಛೀ! ಎಂತಹವನೋ ನೀನು? ಇಂಗ್ಲೀಷ್ ಓದುವೆಯಾ?" ಎಂದ.

ಅನ್ನಪೂರ್ಣೆಯು "ಓದದೆ ಏನು? ಸ್ಕೂಲಿನಲ್ಲಿ ಇಂಗ್ಲೀಷೇ ಓದುವನು! ಎಂದಳು.

ನರೇಂದ್ರನು "ಹುಂ! ಇಂಗ್ಲಿಷ್ ಓದುವನೋ? ಸರಿ, ಹಾಗಾದರೆ 'ಎಂಜಿನ್' ಶಬ್ದದ ಸ್ಪೆಲಿಂಗ್ ಹೇಳು, ಅಮೂಲ್ಯ! ನೋಡುವ—ಆಹಾ, ನೀನು ಹೇಳಿದಂತೆಯೇ ಇದೆ!" ಎಂದ.

ಎಲೋಕೇಶಿಯು "ಅದೆಲ್ಲಾ ಕಷ್ಟವಾದ ಮಾತು. ಅವನಿನ್ನೂ ಚಿಕ್ಕ ಹುಡುಗ: ಛಲಿ! ಅದನ್ನೆಲ್ಲಾ ಹೇಗೆ ಹೇಳುವನು?" ಎಂದಳು.

"ಹೇಳು, ಅಮೂಲ್ಯ!" ಎಂದಳು ಅನ್ನಪೂರ್ಣಾ.

ಆದರೆ ಅಮೂಲ್ಯನು ಮುಖವನ್ನೇ ಮೇಲಕ್ಕೆತ್ತಲಿಲ್ಲ.

ಬಿಂದುವು ಅವನನ್ನು ಅಪ್ಪಿಕೊಂಡು "ನೀವೆಲ್ಲರೂ ಸೇರಿ ಇವನನ್ನು ಲಜ್ಜಿತನನ್ನಾಗಿ ಮಾಡಿದಿರಿ. ಈಗ ಹೇಳೆಂದರೆ ಇವನು ಹೇಗೆ ಹೇಳುವನು?" ಎಂದಳು.

ಬಳಿಕ ಬಿಂದುವಾಸಿನಿಯು ಎಲೋಕೇಶಿಯ ಕಡೆಗೆ ತಿರುಗಿ "ಈ ಸಲ ಇವನು ಪರೀಕ್ಷೆಗೆ ಹೋಗುವನು. ಇವನಿಗೆ ಇಪ್ಪತ್ತು ರೂಪಾಯಿ ಇನಾಮು ದೊರೆಯುವುದೆಂದು ಮಾಸ್ತರು ಹೇಳಿರುವರು. ಆ ರೂಪಾಯಿಗಳಿಗೆ ಇವನೂ ತನ್ನ ಚಿಕ್ಕಪ್ಪನಂತೆ ಒಂದು ಕುದುರೆಯನ್ನು ತೆಗೆದುಕೊಳ್ಳುವನು" ಎಂದಳು.

ಮಾತೇನೋ ನಿಜವಾದರೂ ಎಲ್ಲರೂ ತಮಾಷೆಯೆಂದು ಭಾವಿಸಿ ಕಿಲಕಿಲನೆ ನಕ್ಕರು.

ಎಲೊಕೇಶಿಯು ಬಿಂದುವಾಸಿನಿಗೆ "ನನ್ನ ನರೇಂದ್ರನಾಥ ಕೇವಲ ಓದು-ಬರೆಹ ಒಂದರಲ್ಲೇ ಅಲ್ಲದೆ ಅಭಿನಯದಲ್ಲೂ ಅತ್ಯಂತ ಚತುರ. ಇವನ ಅಭಿನಯವನ್ನು ನೋಡುವ ಪ್ರೇಕ್ಷಕರ ಕಣ್ಣುಗಳಲ್ಲಿ ಅಶ್ರುಧಾರೆಯು ಪ್ರವಹಿಸತೊಡಗುವುದು. ಆಗ, ಸೀತೆಯ ಪಾತ್ರವನ್ನು ವಹಿಸಿದ್ದಾಗ ಹೇಗೆ ಅಭಿನಯಿಸಿದೆ. ತೋರಿಸು, ನರೇಂದ್ರ! ಒಂದು ಸಲ ಇವರಿಗೆ ಅಭಿನಯಿಸಿ ತೋರಿಸು!" ಎಂದು ಹೇಳಿದಳು.

ಕೂಡಲೇ ನರೇಂದ್ರ ಮೊಣಕಾಲೂರಿ ಕುಳಿತು, ಕೈಜೋಡಿಸಿ, ಕಿರು ಕಲು ಧ್ವನಿಯಲ್ಲಿ ಆರಂಭ ಮಾಡಿದ: "ಪ್ರಾಣೇಶ್ವರಾ! ಎಂತಹ ಕುಕ್ಷಣ ದಲ್ಲಿ ನಿನ್ನ—"

ಬಿಂದುವಾಸಿನಿಯು ವ್ಯಾಕುಲಗೊಂಡು "ಅರೆ! ಸ್ವಲ್ಪ ತಾಳು ತಾಳು, ನಿಲ್ಲಿಸು! ಮೇಲುಗಡೆ ಭಾವನವರಿರುವರು" ಎಂದು ಹೇಳಿದಳು.

ನರೇಂದ್ರ ಬೆಚ್ಚಿಬಿದ್ದು ಸುಮ್ಮನಾದ.

ಅನ್ನಪೂರ್ಣೆಯು ಅಷ್ಟು ಮಾತ್ರ ಕೇಳಿದುದಕ್ಕೇ ಮುಗ್ಧಳಾಗಿ ಹೋಗಿ ದ್ದಳು. ಅವಳು "ಭಾವನವರು ಇದ್ದರೆ ಇರಲಿ, ಅದಕ್ಕೇನು ಬಿಂದೂ? ದೇವರ ಕಥೆ ತಾನೇ? ಒಳ್ಳೆಯದೇ ಆಯಿತು!" ಎಂದಳು.

"ಅದು ಹೋಗಲಿ. ನಾನು ಸಾವಿತ್ರಿಯ ಪಾತ್ರವನ್ನು ಅಭಿನಯಿಸು ವೆನು" ಎಂದ ನರೇಂದ್ರ.

"ಬೇಡ" ಎಂದಳು ಬಿಂದೂ

ಈ ಕಂಠ–ಸ್ವರವನ್ನು ಕೇಳಿದ ಬಳಿಕ ಮಾತು ಬಹಳ ಮುಂದುವರಿಯಿ ತೆಂದು ಅನ್ನಪೂರ್ಣೆಗೆ ಜ್ಞಾನೋದಯವಾಯಿತು. ಎಲೊಕೇಶಿಯು ಆಗ ತಾನೇ ಬಂದಿದ್ದವಳು; ಪಾಪ! ಅವಳಿಗೇನುಗೊತ್ತು ಒಳಗಿನ ಮಾತು? ಅವಳು "ಈಗ ಬೇಡ, ನರೇಂದ್ರ ಗಂಡಸರು ಹೊರಗೆ ಹೋಗಿರುವಾಗ ಎಂದಾದರೂ ಮಧ್ಯಾಹ್ನದ ಹೊತ್ತಿನಲ್ಲಿ ಅಭಿನಯಿಸಿ ತೋರಿಸು" ಎಂದಳು.

ಪುನಃ ಬಿಂದುವಿನ ಕಡೆಗೆ ತಿರುಗಿ ಎಲೊಕೇಶಿಯು "ನರೇಂದ್ರ ಎಷ್ಟು ಸೊಗಸಾಗಿ ಹಾಡುವನು ಗೊತ್ತೇ? ದಮಯಂತಿಯು ಅಳುತ್ತಾ ಹಾಡಿದ ಆ ಹಾಡನ್ನು ಯಾವಾಗಲಾದರೂ ಇವರಿಗೆ ಹಾಡಿ ತೋರಿಸು ಮಗೂ! ಒಂದುಸಲ ಅದನ್ನು ಕೇಳಿದರೆ ಪುನಃ ನಿನ್ನನ್ನು ಬಿಡುವುದೇ ಇಲ್ಲ!" ಎಂದಳು.

"ಈಗಲೆ ಹಾಡಲೇ?" ಎಂದು ಕೇಳಿದ ನರೇಂದ್ರ.

ಕ್ರೋಧದಿಂದ ಬಿಂದುವಾಸಿನಿಯ ಮುಖವು ಕೆಂಪಗಾಯಿತು. ಅವಳೇನೂ ಮಾತನಾಡಲಿಲ್ಲ.

ಅನ್ನಪೂರ್ಣೆಯು ಆತುರದಿಂದ "ಬೇಡ, ಬೇಡ! ಹಾಡು-ಗೀಡು ಈಗ ಬೇಡ!" ಎಂದು ಹೇಳಿದಳು.

"ಆ ಹಾಡನ್ನು ನಾನು ಅಮೂಲ್ಯನಿಗೆ ಕಲಿಸಿಕೊಡುವೆನು. ನನಗೆ ಹಾಡು-ನುಡಿಸುವುದೂ ಸಹ ಬರುತ್ತದೆ. ಅದು ಬಹಳ ಕಷ್ಟ ಚಿಕ್ಕಮ್ಮಾ! ಆ ಹಿತ್ತಾಳೆಯ ಪಾತ್ರೆಯನ್ನು ಸ್ವಲ್ಪ ತೆಗೆದುಕೊಡು, ನುಡಿಸಿ ತೋರಿಸುವೆನು" ಎಂದ ನರೇಂದ್ರ.

ಬಿಂದುವು ಅಮೂಲ್ಯನಿಗೆ ಏಳುವಂತೆ ಸನ್ನೆಮಾಡಿ "ಹೋಗು ಮಗೂ! ಒಳಗೆ ಹೋಗಿ ಪಾಠಗಳನ್ನು ಓದಿಕೋ!" ಎಂದು ಹೇಳಿದಳು.

ಅಮೂಲ್ಯನು ನರೇಂದ್ರನ ಮಾತುಗಳನ್ನು ಮುಗ್ಧನಾಗಿ ಕೇಳುತ್ತಿದ್ದ. ಎದ್ದು ಹೋಗಲು ಅವನಿಗೆ ಮನಸ್ಸಿರಲಿಲ್ಲ. ಆದರೂ ಚಿಕ್ಕಮ್ಮನ ಭಯಕ್ಕಾಗಿ ಅವನು "ಇನ್ನು ಸ್ವಲ್ಪ ಹೊತ್ತು ಕುಳಿತುಕೋ, ಚಿಕ್ಕಮ್ಮಾ" ಎಂದ.

ಬಿಂದುವು ಮಾತನಾಡದೆ, ಅವನ ಕೈಗಳನ್ನು ಹಿಡಿದು ಸಂಗಡ ಕೊಠಡಿಗೆ ಕರೆದುಕೊಂಡು ಹೋದಳು. ಅನ್ನಪೂರ್ಣೆಯು ಅವಳ ಈ ರೀತಿಯ ವರ್ತನೆಯ ಕಾರಣವನ್ನು ಅರಿತಳು; ಸಹವಾಸ ದೋಷದಿಂದ ಮಗನು ಎಲ್ಲಿ ಕೆಟ್ಟು ಹೋಗುವನೋ ಎಂಬ ಭಯದಿಂದ ನರೇಂದ್ರನು ಇಲ್ಲಿದ್ದುಕೊಂಡು ಓದುವುದನ್ನೂ ಸಹ ಬಿಂದುವು ಇಷ್ಟಪಡಲಾರಳೆಂದು ಊಹಿಸಿ ಅತ್ಯಂತ ಉದ್ವಿಗ್ನಳಾದಳು. ಅವಳು ನರೇಂದ್ರನನ್ನು ಕುರಿತು "ಮಗೂ, ನರೇಂದ್ರ!

ಬಿಂದುವಿನ ಎದುರಿಗೆ ಈ ಅಭಿನಯ-ನಟನೆ ಮುಂತಾದುವನ್ನು ಮಾಡಬೇಡ. ಅವಳು ಒಂದು ತೆರದ ಕೋಪದ ಸ್ವಭಾವದವಳು, ಇವೆಲ್ಲಾ ಅವಳಿಗೆ ಇಷ್ಟವಿಲ್ಲ'' ಎಂದು ಹೇಳಿದಳು.

ಎಲೋಕೇಶಿಯು ಆಶ್ಚರ್ಯದಿಂದ ''ಬಿಂದುವಿಗೆ ಇವೆಲ್ಲಾ ಇಷ್ಟವಿಲ್ಲವೇ? ಅದಕ್ಕೇ ಈ ರೀತಿ ಎದ್ದು ಹೊರಟುಹೋದಳು ಅಲ್ಲವೇ?" ಎಂದು ಕೇಳಿದಳು.

ಅನ್ನಪೂರ್ಣೆಯು ''ಇರಬಹುದು. ಇನ್ನೊಂದು ಮಾತು ನರೇಂದ್ರ! ನೀನು ನಿನ್ನ ಊಟ-ಪಾಠ, ಓದು-ಬರೆಹಗಳನ್ನು ಚೆನ್ನಾಗಿ ಮಾಡಬೇಕು—ಮಾತೆಯ ದುಃಖವನ್ನು ದೂರಮಾಡುವ ಪ್ರಯತ್ನಮಾಡಬೇಕು. ಅಮೂಲ್ಯನೊಡನೆ ಹೆಚ್ಚಾಗಿ ಸೇರಬೇಡ ಮಗೂ! ಅವನು ಇನ್ನೂ ಚಿಕ್ಕವನು, ಏನೂ ಅರಿಯದವನು. ಆಂ!'' ಎಂದಳು.

ಈ ಮಾತು ಎಲೋಕೇಶಿಗೆ ಅಸಹ್ಯನೆನಿಸಿತು. ಅವಳು ''ಅದೇನೋ ಸರಿ! ಎಷ್ಟಿದ್ದರೂ ಅವನು ಬಡವರ ಮಗ, ಬಡವರಂತಿರಬೇಕು. ಆದರೆ ಅತ್ತಿಗೆ! ನೀನೇ ಈ ರೀತಿ ಹೇಳಿದ ಮೇಲೆ ನಾನೇಕೆ ಹೇಳದಿರಲಿ? ಅಮೂಲ್ಯನೇನೋ ನಿನ್ನ ಏನೂ ಅರಿಯದ ಪುಟ್ಟಮಗು! ಆದರೆ ನರೇಂದ್ರನಾದರೂ ಅಂತಹ ವಯಸ್ಸಾದವನೇನು? ಒಂದೆರಡು ವರ್ಷ ದೊಡ್ಡವನಾದ ಮಾತ್ರಕ್ಕೆ ಅವನು ದೊಡ್ಡವನಾಗಿ ಹೋದನೇ? ಅದೂ ಅಲ್ಲದೆ ಅವನು ಎಂದೂ ದೊಡ್ಡ ಮನುಷ್ಯರ ಮಕ್ಕಳನ್ನು ನೋಡದೆ ಈಗ ಮಾತ್ರ ನೋಡುತ್ತಿರುವನೆಂದು ತಿಳಿದೆಯಾ? ಇವನ ಥಿಯೇಟರಿನಲ್ಲಿ ಎಷ್ಟೋ ರಾಜ-ಮಹಾರಾಜರ ಮಕ್ಕಳೂ ಸಹ ಇರುವರು!" ಎಂದು ಹೇಳಿದಳು.

ಅನ್ನಪೂರ್ಣೆಯು ಅಪ್ರತಿಭಳಾಗಿ ''ಅಲ್ಲ! ನಾನು ಆ ರೀತಿ ಹೇಳಲಿಲ್ಲ. ನಾನು ಹೇಳುವುದು—'' ಎಂದಳು.

''ಪಾಪ, ಇನ್ನಾವ ರೀತಿ ಹೇಳುವೆ? ನಾವು ಮೂರ್ಖರೇನೋ ನಿಜ; ಆದರೂ ಇಷ್ಟನ್ನು ತಿಳಿದುಕೊಳ್ಳಲಾರದಷ್ಟು ಮೂರ್ಖರಲ್ಲ! 'ನರೇಂದ್ರನು ಇಲ್ಲೇ ಇದ್ದುಕೊಂಡು ಓದಲಿ' ಎಂದು ಅಣ್ಣನು ಹೇಳಿದುದರಿಂದ ನಾನ

ಅವನನ್ನು ಇಲ್ಲಿಗೆ ಕರೆತಂದೆ; ಇಲ್ಲದಿದ್ದರೆ ಅಲ್ಲಿ ನಮ್ಮ ಜೀವನವು ನಡೆಯುತ್ತಿರಲಿಲ್ಲವೇ ?''

ಅನ್ನಪೂರ್ಣೆಯು ನಾಚಿಕೆಯಿಂದ ತಲೆ ತಗ್ಗಿಸಿದಳು. ಅವಳು "ಅವಳು ಆ ಮಾತನ್ನು ಹೇಳಿದ್ದರೆ ಭಗವಂತನೇ ನೋಡಿಕೊಳ್ಳಲಿ! ತಾಯಿಯ ದುಃಖವನ್ನು ದೂರಮಾಡುವ ಪ್ರಯತ್ನಮಾಡೆಂದು ನಾನು ಹೇಳಿದರೆ —" ಎಂದಳು.

ಎಲೋಕೇಶಿಯು "ಸರಿಯೆ! ಸರಿಯೆ! ಒಳ್ಳೆಯದು. ನರೇಂದ್ರ, ನೀನು ಹೊರಗೆ ಹೋಗಿ ಕುಳಿತುಕೋ. ದೊಡ್ಡಮನುಷ್ಯರ ಮಕ್ಕಳ ಸಂಗಡ ಸೇರಬೇಡ" ಎಂದು ಹೇಳುತ್ತಾ ಅವಳು ತನ್ನ ಮಗನನ್ನು ಕರೆದುಕೊಂಡು ತಾನೂ ಎದ್ದು ಹೊರಟುಹೋದಳು.

ಅನ್ನಪೂರ್ಣೆಯು ಒಡನೆಯೆ ಬಿಂದುವಿನ ಕೊಠಡಿಗೆ ಓಡಿಹೋಗಿ, ಪೆಟ್ಟಿಗೆ ಮೋರೆಯನ್ನು ಹಾಕಿಕೊಂಡು ಅವಳೊಡನೆ "ಬಿಂದೂ! ನಿನಗೋಸ್ಕರವಾಗಿ ಬಂಧು-ಬಾಂಧವರೆಲ್ಲರನ್ನೂ ಬಿಟ್ಟು ಬಿಡಬೇಕೇ? ಅಲ್ಲಿಂದ ಆ ರೀತಿ ಏಕೆ ಎದ್ದು ಬಂದೆ, ಹೇಳು!" ಎಂದಳು.

ಬಿಂದುವು ಸ್ವಾಭಾವಿಕ ರೀತಿಯಿಂದ "ಅದೇಕೆ ಅಕ್ಕಾ! ನನಗಾಗಿ ಬಂಧು-ಬಳಗದವರನ್ನು ಏಕೆ ಬಿಡಬೇಕು? ಇಷ್ಟ-ಬಾಂಧವರೊಡಗೂಡಿ ನೀವು ಮನಬಂದಂತೆ ಮಹದಾನಂದದಿಂದ ಇರಿ. ನಾನು ನನ್ನ ಮಗನೊಡನೆ ಎಲ್ಲಾದರೂ ಹೋಗುವೆನು! ಸರಿಯಷ್ಟೆ?'' ಎಂದಳು.

"ಹೋಗುವೆಯಾದರೂ ಎಲ್ಲಿಗೆ? ಸ್ವಲ್ಪ ಹೇಳು, ಕೇಳುವ!''

"ಹೋಗುವಾಗ ನಿಮಗೆ ನನ್ನ ವಿಳಾಸವನ್ನು ತಿಳಿಸಿ ಹೋಗುವೆನು. ಚಿಂತಿಸಬೇಡಿ'' ಎಂದಳು ಬಿಂದುವಾಸಿನಿ.

ಅನ್ನಪೂರ್ಣೆಯು "ಹೀಗಾಗುವುದೆಂದು ನನಗೆ ಮೊದಲೇ ಗೊತ್ತು. ನಾಲ್ಕಾರು ಜನರ ಮುಂದೆ ಮುಖಮೆತ್ತದಂತೆ ಮಾಡಿದ ಹೊರತು ನಿನ್ನ ಮನಸಿಗೆ ತೃಪ್ತಿ ಎಲ್ಲಿಯದು ಬಿಂದೂ? ನಿನ್ನ ಕಾರಣದಿಂದ ನನಗೆ ಬೇಸರವೆನಿಸಿ ಹೋಗಿದೆ'' ಎಂದು ಹೇಳುತ್ತಾ ಹೋಗುತ್ತಿರುವಂತೆಯೇ ಮಾಧವನು

ಬರುತ್ತಿರುವುದನ್ನು ಕಂಡು ಮತ್ತಷ್ಟು ಕೋಪದಿಂದ ''ಲಾಲಾ, ನೀವಿಬ್ಬರೂ ಎಲ್ಲಾದರೂ ಬೇರೆ ಇರಿ; ಇಲ್ಲದಿದ್ದರೆ ಬಿಂದುವನ್ನು ಕಳುಹಿಸಿಬಿಡು. ಇನ್ನು ನನ್ನಿಂದ ಸಹಿಸಲಾಗುವುದಿಲ್ಲ. ಈ ದಿನ ಈ ವಿಷಯವನ್ನು ಸ್ಪಷ್ಟವಾಗಿ ಹೇಳಿರುವೆನು'' ಎನ್ನುತ್ತಾ ಕೆಳಗಿಳಿದು ಹೊರಟುಹೋದಳು.

ಮಾಧವ ದಿಗ್ಭ್ರಾಂತನಾಗಿ ಪತ್ನಿಯನ್ನು ''ವಿಷಯವೇನು ?'' ಎಂದು ಕೇಳಿದ.

''ನನಗೆ ತಿಳಿಯದು, ಅಕ್ಕನವರು ನಮ್ಮನ್ನು ಕಳುಹಿಸಿಬಿಡಬೇಕೆಂದು ಹೇಳಿರುವರು. ನಮ್ಮನ್ನು ಕಳುಹಿಸಿಬಿಡಿರಿ !" ಎಂದಳು ಬಿಂದೂ.

ಮಾಧವನು ಮೌನವನ್ನು ತಾಳಿದ. ಮುಂದೇನೂ ಹೇಳಲಿಲ್ಲ. ಮೇಜಿನ ಮೇಲಿದ್ದ ಸಮಾಚಾರ ಪತ್ರವನ್ನು ತೆಗೆದುಕೊಂಡು ಹೊರಗಡೆಯ ಕೊಠಡಿಗೆ ಹೋದ.

೫

ಎಲೊಕೇಶಿಯು ನೋಡಲು ಏನೂ ಅರಿಯದವಳಂತೆ ಕಂಡರೂ ವಾಸ್ತವದಲ್ಲಿ ಹಾಗಿರಲಿಲ್ಲ. ಪುತ್ರವಿಹೀನಳಾದ ಬಿಂದುವಾಸಿನಿಯ ಬಳಿ ಬಹಳ ದುಡ್ಡಿರುವುದೆಂದು ಅರಿತ ಬಳಿಕಂತೂ ಅವಳ ಧ್ಯಾನವು ಸರ್ವದಾ ಅತ್ತ ಕಡೆಗೇ ಇರುತ್ತಿತ್ತು. ನಿತ್ಯವೂ ರಾತ್ರಿ ಮಲಗಿಕೊಳ್ಳುವಾಗ ಅವಳು ಪತಿಯನ್ನು ದೂಷಿಸುತ್ತ—'' ನಿಮ್ಮಿಂದಲೇ ನನ್ನ ಸರ್ವಸ್ವವೂ ಹಾಳಾಯಿತು. ಅಲ್ಲಿ ನಿಮ್ಮ ಬಳಿ ಬಿದ್ದಿರದೆ ಇಲ್ಲಿಗೆ ಬಂದಿದ್ದರೆ, ಇಂದು ನಾನು ರಾಜಮಾತೆಯಂತೆ ಇರುತ್ತಿದ್ದೆ. ಚಿನ್ನದ ಪ್ರತಿಮೆಯಂತಹ ನನ್ನ ಕಂದನನ್ನು ಸಾಕಿಕೊಳ್ಳದೆ ಬಿಂದುವಾಸಿನಿಯು ಆ ರೂಪವಿಹೀನನಾದ ಹುಡುಗನನ್ನು—'' ಎಂದು ದೀರ್ಘವಾಗಿ ನಿಟ್ಟುಸಿರು ಬಿಡುವಳು. ಪುನಃ ''ಇರಲಿ, ಬಡವರಿಗೆ ಭಗವಂತನಿರುವನು !'' ಎಂದು ತನ್ನನ್ನು ತಾನೇ ಸಮಾಧಾನಪಡಿಸಿಕೊಂಡು ನಿದ್ರೆ ಮಾಡುವಳು. ಪ್ರಿಯನಾಥನು ಸಹ ಮನದಲ್ಲೇ ತನ್ನ ಮೂರ್ಖತನಕ್ಕಾಗಿ ದುಃಖಿಸುತ್ತ ಹಾಗೆಯೇ ನಿದ್ರಿಸುವನು. ಇದೇ ರೀತಿಯಾಗಿ ಈ ದಂಪತಿಗಳ ದಿನಗಳು ಕಳೆಯುತ್ತಿದ್ದುವು. ಬಿಂದು

ವಾಸಿನಿಯ ವಿಷಯದಲ್ಲಿ ಏಲೋಕೇಶಿಯ ಸ್ನೇಹ-ಪ್ರೇಮಗಳು ದಿನದಿನಕ್ಕೂ ಹೆಚ್ಚುತ್ತ ಬಂದುವು—ನದಿಯ ಮಹಾಪೂರದಂತೆ.

ಒಂದುದಿನ ಮಧ್ಯಾಹ್ನ ಏಲೋಕೇಶಿಯು ಬಿಂದುವನ್ನು ಕುರಿತು ' ಬಿಂದು, ನಿನ್ನ ತಲೆಗೂದಲು ಕಾರ್ಮೋಡದಂತೆ ಎಷ್ಟು ಕಪ್ಪಾಗಿರುವುದು! ನೀನು ಒಂದು ದಿನವಾದರೂ ತಲೆಗೂದಲನ್ನು ಕಟ್ಟಿಕೊಳ್ಳುವುದಿಲ್ಲ. ಏಕೆ? ಈ ದಿನ ಜಮಿನುದಾರರ ಮನೆಯ ಸ್ತ್ರೀಯರೆಲ್ಲರೂ ತಿರುಗಾಡಲು ಹೋಗುವರು. ಬಾ, ನಿನಗೂ ತಲೆಗೂದಲನ್ನು ಅಂದವಾಗಿ ಬಾಚಿ ಜಡೆ ಹಾಕುವೆನು '' ಎಂದಳು.

ಬಿಂದುವು ಏಲೋಕೇಶಿಯನ್ನೂ 'ಅಕ್ಕ' ಎಂದೇ ಕರೆಯುತ್ತಿದ್ದಳು. ಅವಳು ''ಇಲ್ಲ, ಅಕ್ಕನವರೇ, ಬೇಡ! ಹುಡುಗ ದೊಡ್ಡವನಾಗಿ ಹೋದ. ನೋಡುವನು! ತಲೆಯ ಮೇಲೆ ಮುಸುಕು ಹಾಕಿಕೊಳ್ಳುವುದೆಂದರೆ ನನಗಾಗುವುದಿಲ್ಲ" ಎಂದಳು.

ಏಲೋಕೇಶಿಯು ಚಕಿತಳಾದಳು. ಅವಳು ''ಇದೆಂತಹ ಮಾತನಾಡುವೆ ಬಿಂದೂ? ಮಕ್ಕಳು ದೊಡ್ಡವರಾದರೆ ತಾಯಿಂದಿರು ಜಡೆ-ಹಾಕಿಕೊಳ್ಳಬಾರದೇ? ನನ್ನ ನರೇಂದ್ರನಾಥನೂ ಅಮೂಲ್ಯನಿಗಿಂತ ಆರು ತಿಂಗಳು ದೊಡ್ಡವನು, ಅಂದ ಮಾತ್ರಕ್ಕೆ ನಾನು ಜಡೆ ಹಾಕಿಕೊಳ್ಳುವುದನ್ನು ಬಿಟ್ಟು ಬಿಡಲಾಗುವುದೇ?'' ಎಂದಳು.

''ನೀವೇತಕ್ಕೆ ಬಿಡಬೇಕು? ನರೇಂದ್ರನಾದರೆ ನಿತ್ಯವೂ ನೋಡುತ್ತಿರುವನು. ಅವನ ಮಾತೇ ಬೇರೆ. ಆದರೆ ಅಮೂಲ್ಯನು ಎಂದೂ ನೋಡದೆ, ಹೊಸದಾಗಿ ಈ ದಿವಸ ನಾನು ಜಡೆ ಹಾಕಿಕೊಂಡುದನ್ನು ಕಂಡರೆ ಆಶ್ಚರ್ಯ-ಚಕಿತನಾಗಿ ಎವೆ ಇಕ್ಕದೆ ನೋಡತೊಡಗುವನು. ಅಲ್ಲದೆ ಎಷ್ಟು ಹಾಸ್ಯ ಮಾಡುವನೊ—ಎಷ್ಟು ಗಲಾಟೆ ಮಾಡುವನೊ! ಛಿಃ, ಛಿಃ; ಬಹಳ ನಾಚಿಕೆಯಾಗುವುದು!'' ಎಂದಳು ಬಿಂದೂ.

ಅನ್ನಪೂರ್ಣೆಯು ಅದೇ ಕಡೆಗೆ ಹೋಗುತ್ತಿದ್ದಳು. ಬಿಂದುವಿನ ಕಡೆಗೆ ನೋಡಿ, ಹೋಗುತ್ತಿದ್ದವಳು ಹಾಗೆಯೇ ನಿಂತು ''ಬಿಂದೂ, ನಿನ್ನ

ಕಣ್ಣುಗಳೇಕೆ ಹೀಗಿವೆ? ಇಲ್ಲಿ ಬಾ, ಸ್ವಲ್ಪ ಮೈಮುಟ್ಟಿ ನೋಡೋಣ!" ಎಂದಳು.

ಎಲೋಕೇಶಿಯು ಇದ್ದುದರಿಂದ ಬಿಂದುವು ಲಜ್ಜಿತಳಾದಳು. ಅವಳು "ನಿತ್ಯ ನಿತ್ಯ ಮೈಮುಟ್ಟಿ ನೋಡುವುದೇನು? ಅಕ್ಕಾ! ನನ್ನ ದೇಹಸ್ಥಿತಿ ಹೇಗಿದೆಯೆಂಬುದನ್ನು ನಾನು ತಿಳಿಯಲಾರೆನೇ? ನಾನೇನು ಇನ್ನೂ ಅರಿಯದ ಚಿಕ್ಕ ಮಗುವೇ?" ಎಂದಳು.

"ಇಲ್ಲ, ನೀನು ದೊಡ್ಡ ಮುದುಕಿ. ನನ್ನ ಹತ್ತಿರ ಬಾ, ನೋಡೋಣ. ಭಾದ್ರಪದ ಮಾಸ, ಚಳಿ-ಜ್ವರದ ದಿನಗಳು" ಎಂದಳು ಅನ್ನಪೂರ್ಣಾ.

"ಇಲ್ಲ, ನಾನು ಖಂಡಿತ ಬರುವುದಿಲ್ಲ. ಏನೂ ಆಗಿಲ್ಲವೆಂದು ಹೇಳುತ್ತಿರುವೆನು, ಪುನಃ ಹತ್ತಿರ ಬರಬೇಕಂತೆ!"

"ನೋಡು, ಬಚ್ಚಿಡಬೇಡ!" ಎಂದು ಹೇಳಿ ಸಂದಿಗ್ಧ ದೃಷ್ಟಿಯಿಂದ ನೋಡುತ್ತಾ ಅನ್ನಪೂರ್ಣೆಯು ಹೋದಳು.

"ಹಿರಿಯ ಸೊಸೆಗೆ ತಮಾಷೆ ಮಾಡುವುದು ಸೇರುತ್ತದೆ ಅಲ್ಲವೆ?" ಎಂದಳು ಎಲೋಕೇಶಿ.

ಬಿಂದುವಾಸಿನಿಯು ಕೊಂಚಕಾಲ ಸುಮ್ಮನಿದ್ದು "ಇಂಥ ತಮಾಷೆ ಮಾಡುವ ಪ್ರಕೃತಿ ಎಲ್ಲರಿಗೂ ಇರಲಿ ಎಲೋಕೇಶೀ!" ಎಂದಳು.

ಎಲೋಕೇಶಿಯು ಸುಮ್ಮನಾದಳು.

ಅನ್ನಪೂರ್ಣೆಯು ಕೈಯಲ್ಲಿ ಏನನ್ನೋ ಹಿಡಿದುಕೊಂಡು ಅದೇ ಹಾದಿಯಿಂದ ಹಿಂತಿರುಗುತ್ತಿದ್ದಳು. ಬಿಂದುವು ಅವಳನ್ನು ಕರೆದು "ಅಕ್ಕಾ, ಈ ದಿವಸ ನೀವು ಜಡೆ ಹಾಕಿಕೊಳ್ಳುವಿರಾ?" ಎಂದಳು.

ಅನ್ನಪೂರ್ಣೆಯು ತಿರುಗಿನೋಡಿ ನಿಂತಳು. ಒಂದು ಕ್ಷಣ ಎಲ್ಲವನ್ನೂ ನೋಡಿದ ಬಳಿಕ ಅವಳಿಗೆ ವಿಷಯ ಗೊತ್ತಾಯಿತು. ಅವಳು ಎಲೋಕೇಶಿಯನ್ನು ಕುರಿತು "ನಾನು ಸಹ ಅವಳಿಗೆ ಎಷ್ಟೋ ಸಲ ಹೇಳಿದೆ. ಆದರೇನು? ಅವಳಿಗೆ ಹೇಳುವುದು ವ್ಯರ್ಥ. ಇಷ್ಟು ಕೂದಲಿದೆ, ಕಟ್ಟಿ

ಕೊಳ್ಳುವುದಿಲ್ಲ; ಎಷ್ಟು ಒಡವೆ-ವಸ್ತ್ರಗಳಿವೆ, ಹಾಕಿಕೊಳ್ಳುವುದಿಲ್ಲ; ಎಂತಹ ರೂಪಿದೆ, ಒಂದುಸಲ ನೋಡುವುದು ಸಹ ಇಲ್ಲ. ಇವಳ ಎಲ್ಲ ವರ್ತನೆಗಳೂ ವಿಚಿತ್ರವಾದುವೇ! ಮಗನೂ ಅಂತಹವನೇ! ಆ ದಿನ ಅಮೂಲ್ಯ ನನ್ನೊಡನೆ ಏನು ಹೇಳಿದ ಗೊತ್ತೇ ಬಿಂದು? 'ಒಳ್ಳೆಯ ಬಟ್ಟೆ-ಬರೆಗಳನ್ನು ಹಾಕಿಕೊಳ್ಳುವುದರಿಂದ ಏನು ಬರುವುದು? ಚಿಕ್ಕಮ್ಮನ ಬಳಿ ಅಷ್ಟೊಂದು ವಸ್ತ್ರಾಭರಣಗಳಿವೆ, ಎಂದಾದರೂ ಧರಿಸುವಳೇ? ನೋಡು!' ಎಂದು ಹೇಳುವನು" ಎಂದಳು.

ಬಿಂದುವು ಅಭಿಮಾನದಿಂದ ತಲೆಯೆತ್ತಿ, ನಗುತ್ತ "ಆದರೆ ಅಕ್ಕಾ! ಮಗನು ದೊಡ್ಡವನಾಗಲಿ—ನಾಲ್ಕಾರು ಜನರಂತೆ ಅವನೂ ಆಗಲಿ ಎಂಬ ಅಪೇಕ್ಷೆ ಇದ್ದರೆ ಮಾತೆಯರು ವಿಚಿತ್ರ ರೀತಿಯಿಂದಲೇ ವರ್ತಿಸಬೇಕಾಗುವುದು. ದೇವರ ದಯೆಯಿಂದ ಅದುವರೆಗೂ ಬದುಕಿದ್ದರೆ, ಊರಿನ ಜನರೆಲ್ಲಾ ಕೈತೋರಿಸಿ ಹೆಮ್ಮೆಯಿಂದ 'ಇದೋ! ಈಕೆಯೇ ಅಮೂಲ್ಯನ ತಾಯಿ ಎಂದು ಹೇಳುವರು" ಎನ್ನುತ್ತಿರುವಂತೆಯೇ ಅವಳ ಕಣ್ಣುಗಳು ಕಂಬನಿದುಂಬಿದುವು.

ಅದನ್ನು ಕಂಡು ಅನ್ನಪೂರ್ಣೆಯು ಸ್ನೇಹಭಾವದಿಂದ "ಆದುದರಿಂದಲೇ ಅಮೂಲ್ಯನ ವಿಚಾರವಾಗಿ ನಾವು ಯಾರೂ ಏನನ್ನೂ—ಹೇಳುವುದಿಲ್ಲ. ಭಗವಂತನ ಕೃಪೆಯಿಂದ ನಿನ್ನ ಮನಸದ ಅಭಿಲಾಷೆಯು ಈಡೇರಲಿ. ಆದರೆ ಇಷ್ಟು ದೊಡ್ಡ ಆಸೆಗೆ ನಾನು ನನ್ನ ಮನದಲ್ಲಿ ಎಡೆಗೊಡಲಾರೆ!" ಎಂದಳು.

ಬಿಂದುವು ಸೆರಗಿನಿಂದ ಕಣ್ಣುಗಳನ್ನು ಒರೆಸಿಕೊಳುತ್ತ "ಈ ಒಂದು ಆಸೆಯಿಂದಲೇ ನಾನು ಬದುಕಿರುವೆನು ಅಕ್ಕಾ!" ಎಂದಳು ಅಭಿಮಾನದಿಂದ ಆಕೆಯ ಮೈಮೇಲೆ ರೋಮಗಳೆದ್ದುವು. ಆದರೆ ಒಡನೆಯೇ ಲಜ್ಜಿತಳಾಗಿ ನಗಲು ಪ್ರಯತ್ನಿಸುತ್ತಾ ಅವಳು "ಇಲ್ಲ, ಅಕ್ಕಾ! ಈ ನನ್ನ ಆಸೆಯಲ್ಲಿ ಏನಾದರೂ ವಿಘ್ನ ಬಂದೊದಗಿದರೆ ನನಗೆ ಹುಚ್ಚು ಹಿಡಿಯುವುದರಲ್ಲಿ ಸಂದೇಹವಿಲ್ಲ" ಎಂದಳು.

ಅನ್ನಪೂರ್ಣೆಯು ಮರುಮಾತಾಡಲಿಲ್ಲ. ಚಕಿತಳಾಗಿ ಸುಮ್ಮನೆ ನಿಂತಳು. ಬಿಂದುವಿನ ಮನಸದಭಿಲಾಷೆಯು ಅವಳಿಗೆ ತಿಳಿಯದೆಂದಲ್ಲ;

ಆದರೆ ಅವಳ ಆಶೆ-ಆಕಾಂಕ್ಷೆಗಳ ಇಂತಹ ತೀವ್ರ-ಪ್ರತಿಚ್ಛಾಯೆಯನ್ನು ಇದುವರೆಗೆ ಅವಳಿಂದೂ ಸ್ಪಷ್ಟರೂಪದಿಂದ ನೋಡಿರಲಿಲ್ಲ. ಬಿಂದುವು ಅಮೂಲ್ಯನ ವಿಚಾರದಲ್ಲಿ ಇಷ್ಟು ಸತರ್ಕಳಾಗಿಯೂ ಜಾಗರೂಕಳಾಗಿಯೂ ಇರುವುದರ ಕಾರಣವನ್ನು ಅನ್ನಪೂರ್ಣೆಯು ಈ ದಿನ ಅರಿತಳು! ತನ್ನ ಪುತ್ರನ ಈ ಸರ್ವ ಮಂಗಳಾಕಾಂಕ್ಷಿಯ ಮುಖವನ್ನು ಕಂಡು ಆಕೆಯ ಮಾತೃಹೃದಯವು ಒಂದು ಬಗೆಯ ಅನಿರ್ವಚನೀಯ ಶ್ರದ್ಧೆಯಿಂದ ತುಂಬಿ ತುಳುಕಿತು! ಹರಿಯುತ್ತಿರುವ ಕಂಬನಿಗಳನ್ನು ಮರೆಮಾಡುವುದಕ್ಕಾಗಿ ಅವಳು ಮುಖವನ್ನು ಬೇರೆ ಕಡೆಗೆ ತಿರುಗಿಸಿದಳು.

ಎಲೊಕೇಶಿಯು "ಅದಿರಲಿ ಬಿಂದೂ! ಈ ದಿವಸ ನೀನು—" ಎಂದಳು.

ಬಿಂದುವು ಮಧ್ಯದಲ್ಲೇ ಮಾತನಾಡುತ್ತ "ಈ ದಿವಸ ಅಕ್ಕನಿಗೆ ಜಡೆ ಹಾಕಿರಿ. ಈ ಮನೆಗೆ ಬಂದ ಬಳಿಕ ಒಂದು ದಿನವಾದರೂ ಅವರು ತಲೆಗೂದಲು ಕಟ್ಟಿಕೊಂಡುದನ್ನು ನೋಡಲಿಲ್ಲ—" ಎಂದು ಹೇಳಿ ಮುಗುಳುನಗೆ ನಗುತ್ತಾ ಅಲ್ಲಿಂದ ಹೊರಟುಹೋದಳು.

ಐದಾರು ದಿನಗಳು ಕಳೆದುವು. ಬಳಿಕ ಒಂದುದಿನ ಬೆಳಗ್ಗೆ ಈ ಮನೆಯ ಹಜಾಮನು ಯಾದವ ಬಾಬುಗಳ ಕ್ಷೌರ ಮಾಡಿ ಕೆಳಗಿಳಿದು ಬರುತ್ತಿದ್ದ. ಅಷ್ಟರಲ್ಲಿ ಅಮೂಲ್ಯ ಓಡಿಬಂದು, ಅವನ ಹಾದಿಕಟ್ಟಿ ನಿಂತು "ಏ, ಕೈಲಾಸ! ನರೇಂದ್ರನಂತೆ ನನಗೂ ಹಜಾಮತ್ ಮಾಡುವೆಯಾ?" ಎಂದು ಕೇಳಿದ.

ಹಜಾಮನು ಚಕಿತನಾಗಿ "ಎಂತಹ ಹಜಾಮತ್ ಮಗೂ!" ಎಂದು ಕೇಳಿದ.

ಅಮೂಲ್ಯನು ತನ್ನ ತಲೆಯನ್ನು ತೋರಿಸುತ್ತಾ ನೋಡು, ಇಲ್ಲಿ ಹನ್ನೆರಡಾಣೆ, ಇಲ್ಲಿ ಆರಾಣೆ, ಇಲ್ಲಿ ಎರಡಾಣೆ, ನಂತರ ಕತ್ತಿನ ಬಳಿ ಏನೂ ಇಲ್ಲದಂತೆ ಕೂದಲು ಕತ್ತರಿಸಿಬಿಡಬೇಕು! ಕತ್ತರಿಸುವೆಯಾ?" ಎಂದ.

ಹಜಾಮನು ನಗುತ್ತ "ಇಲ್ಲ, ಹಾಗಾಗುವುದಿಲ್ಲ. ಆ ರೀತಿ ಕತ್ತರಿಸಲು ನಮ್ಮಪ್ಪನಿಂದಲೂ ಸಾಧ್ಯವಿಲ್ಲ!" ಎಂದ.

ಅಮೂಲ್ಯನು ಅಷ್ಟಕ್ಕೇ ಸುಮ್ಮನಾಗಲಿಲ್ಲ. ಅವನು "ಅದೇನೂ ಕಷ್ಟವಿಲ್ಲ ಕೈಲಾಸ! ಇಲ್ಲಿ ಹನ್ನೆರಡಾಣೆ, ಇಲ್ಲಿ ಆರಾಣೆ—" ಎಂದ.

ಹಜಾಮನು ಹೇಗಾದರೂ ಮಾಡಿ ತಪ್ಪಿಸಿಕೊಳ್ಳಬೇಕೆಂದು ಯೋಚಿಸಿ "ಆದರೆ ಇವೊತ್ತು ಯಾವ ವಾರ? ಅದೂ ಅಲ್ಲದೆ ಚಿಕ್ಕಮ್ಮನವರ ಅಪ್ಪಣೆ ದೊರೆತ ಹೊರತು ನಾನು ಕತ್ತರಿಸಲಾರೆ" ಎಂದ.

ಅಮೂಲ್ಯನು "ಹಾಗಾದರೆ ಇಲ್ಲೇ ಇರು, ಕೇಳಿ ಬರುವೆನು" ಎಂದು ಒಂದು ಹೆಜ್ಜೆ ಹೋಗಿ, ಪುನಃ ವಾಪಸು ಬಂದು "ನಿನ್ನ ಕೊಡೆಯನ್ನು ನನ್ನ ಬಳಿ ಕೊಡು, ಇಲ್ಲದಿದ್ದರೆ ನೀನು ಓಡಿಹೋಗುವೆ" ಎಂದು ಬಲಾತ್ಕಾರದಿಂದ ಅವನ ಕೊಡೆಯನ್ನು ಕಿತ್ತುಕೊಂಡು ಒಳಕ್ಕೆ ಹೋದ.

ಚಿಕ್ಕಮ್ಮನ ಕೊಠಡಿಯನ್ನು ಪ್ರವೇಶಿಸಿದೊಡನೆಯೇ ಆತುರದಿಂದ "ಚಿಕ್ಕಮ್ಮಾ! ಸ್ವಲ್ಪ ಬೇಗ ಹೊರಗೆ ಬಾ!" ಎಂದ.

ಬಿಂದುವು ಆಗತಾನೇ ಸ್ನಾನ-ಪಾನಾದಿಗಳನ್ನು ಮುಗಿಸಿಕೊಂಡು ಪೂಜೆಗೆ ಕೂಡಲು ಹೊರಟಿದ್ದಳು. ಗಾಬರಿಯಿಂದ ಅವಳು "ಅರೇ! ಮುಟ್ಟಬೇಡ, ಮುಟ್ಟಬೇಡ! ಪೂಜೆಮಾಡಬೇಕು" ಎಂದಳು.

"ಪೂಜೆ ಆಮೇಲೆ ಮಾಡಿದರಾಯಿತು. ಚಿಕ್ಕಮ್ಮಾ! ಒಂದುಸಲ ಹೊರಗೆ ಬಂದು ಅಪ್ಪಣೆ ಕೊಟ್ಟು ಹೋಗು. ಇಲ್ಲದಿದ್ದರೆ ಅವನು ಕೂದಲು ಕತ್ತರಿಸುವುದಿಲ್ಲ. ಹೊರಗೆ ನಿಂತಿರುವನು."

ಬಿಂದುವಾಸಿನಿಗೆ ಅಚ್ಚರಿಯಾಯಿತು. ಹೊಡೆಯಿಸಿ-ಬೈಸಿಕೊಂಡ ಹೊರತು ಎಂದೂ ತಲೆಗೂದಲನ್ನು ಕತ್ತರಿಸಿಕೊಂಡವನಲ್ಲ ಅಮೂಲ್ಯ. ಆದರೆ ಈ ದಿನ ಇಚ್ಛಾಪೂರ್ವಕವಾಗಿ ಕತ್ತರಿಸಿಕೊಳ್ಳಲು ಅಪೇಕ್ಷಿಸುವನು. ಇದರ ಕಾರಣವನ್ನು ತಿಳಿಯಲಾರದೆ ಅವಳು ಹೊರಗೆ ಬಂದಳು. ಬಂದೊಡನೆಯೇ ಹಜಾಮನು "ಅಮ್ಮಾ, ಇದೆಂತಹ ಆಜ್ಞೆ! ನರೇಂದ್ರಬಾಬುವಿನಂತೆ ಹನ್ನೆರಡಾಣೆ, ಆರಾಣೆ, ಮೂರಾಣೆ, ಎರಡಾಣೆ, ಒಂದಾಣೆ ಕೂದಲನ್ನು ಕತ್ತರಿಸಬೇಕಂತೆ. ಅದು ನನ್ನಿಂದ ಆಗುವುದೇ?" ಎಂದ.

ಅಮೂಲ್ಯನು "ಎಲ್ಲಾ ಆಗುವುದು, ಚೆನ್ನಾಗಿ ಆಗುವುದು. ಸ್ವಲ್ಪ ತಡೆ, ನರೇಂದ್ರನನ್ನು ಕರೆತರುವೆನು" ಎನ್ನುತ್ತ ಓಡಿಹೋದ.

ನರೇಂದ್ರ ಮನೆಯಲ್ಲಿರಲಿಲ್ಲ. ಹುಡುಕಿ ಹುಡುಕಿ ಬೇಸತ್ತು, ಕಡೆಗೆ ಅಮೂಲ್ಯ ವಾಪಸು ಬಂದು "ಅವನು ಮನೆಯಲ್ಲಿಲ್ಲ ಚಿಕ್ಕಮ್ಮಾ! ಇಲ್ಲದಿದ್ದರೇನು, ನೀನೇ ಸ್ವಲ್ಪ ನಿಂತು ತೋರಿಸಿಕೊಡು. ಸರಿಯಾಗಿ ನೋಡಿಕೋ—ಇಲ್ಲಿ ಹನ್ನೆರಡಾಣೆ, ಇಲ್ಲಿ ಆರಾಣೆ, ಇಲ್ಲಿ ಎರಡಾಣೆ, ಇಲ್ಲಿ ತೀರ ಸಣ್ಣ" ಎಂದ.

ಅವನ ಈ ವ್ಯಗ್ರತೆಯನ್ನು ಕಂಡು ಬಿಂದುವಿಗೆ ತಡೆಯಲಾರದಷ್ಟು ನಗೆ ಬಂದಿತು. ಅವಳು "ಪೂಜೆ ಮಾಡಬೇಕು, ಅಮೂಲ್ಯ!" ಎಂದಳು.

"ಪೂಜೆಯನ್ನು ನಂತರ ಮಾಡು. ಇಲ್ಲದಿದ್ದರೆ ಮುಟ್ಟಿಬಿಡುವೆನು."

ಮತ್ತಾವ ಉಪಾಯವನ್ನೂ ಕಾಣದೆ ಬಿಂದುವು ಅಲ್ಲೇ ನಿಂತಿರಬೇಕಾಯಿತು.

ಹಜಾಮನು ತಲೆಗೂದಲನ್ನು ಕತ್ತರಿಸತೊಡಗಿದ. ಬಿಂದುವಾಸಿನಿಯು ಆತನಿಗೆ ಕಣ್ಣಿನಿಂದ ಸನ್ನೆ ಮಾಡಿದಳು,—ಅವನು ಎಲ್ಲವನ್ನೂ ಒಂದೇ ಸಮನೆ ಕತ್ತರಿಸಿಬಿಟ್ಟ. ಅಮೂಲ್ಯ ತಲೆಯ ಮೇಲೆ ಕೈಯಾಡಿಸುತ್ತ ಸಂತುಷ್ಟನಾಗಿ "ಸಾಕು, ಸರಿಯಾಗಿದೆ!" ಎಂದು ಹೇಳಿ ಆನಂದದಿಂದ ಕುಣಿದಾಡುತ್ತ ಹೊರಟುಹೋದ.

ಹಜಾಮನು ಕೊಡೆಯನ್ನು ಕಂಕುಳಲ್ಲಿರಿಸಿಕೊಂಡು "ತಾಯಿ! ಇನ್ನು ಮುಂದೆ ಈ ಮನೆಗೆ ಬರುವುದೇ ಕಷ್ಟವಾಗಿ ಹೋಗುವುದು" ಎಂದು ಹೇಳಿ ತನ್ನ ಹಾದಿಯನ್ನು ಹಿಡಿದ.

ಅಡಿಗೆಯವಳು ತಟ್ಟೆ ಹಾಕಿ ಊಟಕ್ಕೆ ಕರೆಯುತ್ತಿದ್ದಳು. ಬಿಂದುವಾಸಿನಿಯು ಅಡಿಗೆಯ ಮನೆಯಲ್ಲಿ ಒಂದೆಡೆ ಕುಳಿತು ಪಾತ್ರೆಯಲ್ಲಿ ಹಾಲು ತುಂಬುತ್ತಿದ್ದಳು. ಅಷ್ಟರಲ್ಲಿ ಕೆಲಸದವಳು ಬಂದು ಅಮೂಲ್ಯನು ತನ್ನ ಚಿಕ್ಕಪ್ಪನ ತಲೆ ಬಾಚುವ ಬ್ರಷನ್ನು ಹುಡುಕುತ್ತಿರುವನೆಂದು ಹೇಳಿದಳು.

ತುಸುಹೊತ್ತಿನ ನಂತರ ಅವನು ಅಳುತ್ತ ಬಿಂದುವಿನ ಬಳಿ ಬಂದು, ಅವಳ ಭುಜದ ಮೇಲೆ ಬಾಗಿ "ಏನೇನೂ ಸರಿಯಾಗಲಿಲ್ಲ. ಚಿಕ್ಕಮ್ಮಾ! ಎಲ್ಲವನ್ನೂ ಕೆಡಿಸಿಬಿಟ್ಟ. ಅವನು ನಾಳೆ ಬರಲಿ, ಚೆನ್ನಾಗಿ ಹೊಡೆದುಬಿಡುವೆನು" ಎಂದ. ಈ ಮಾತನ್ನು ಕೇಳಿ ಬಿಂದು ಕಿಲಕಿಲನೆ ನಗತೊಡಗಿದಳು. ಅಮೂಲ್ಯನು ಕೋಪದಿಂದ ಅವಳ ಭುಜವನ್ನು ಬಿಟ್ಟು ದೂರ ಸರಿದು ಅಳುತ್ತಾ "ನೀನೇನು ಅಂಧಳೇ? ನಿನಗೂ ಕಣ್ಣು ಕಾಣಿಸಲಿಲ್ಲವೆ?" ಎಂದು ಕೂಗಾಡತೊಡಗಿದ.

ಅವನ ಈ ಕೂಗಾಟವನ್ನು ಕೇಳಿ ಅನ್ನಪೂರ್ಣೆಯು ಅಡಿಗೆಯ ಮನೆಯನ್ನು ಪ್ರವೇಶಿಸಿದಳು. ಸಂಗತಿಯನ್ನು ತಿಳಿದುಕೊಂಡ ಬಳಿಕ ಅವಳು "ಇದರಲ್ಲಿ ಏನು ನಷ್ಟವಾಯಿತು? ನಾಳೆಯ ದಿನ ಬಂದಾಗ ಸರಿಯಾಗಿ ಕತ್ತರಿಸುವಂತೆ ಹೇಳಿದರಾಯಿತು!" ಎಂದಳು

ಅಮೂಲ್ಯನಿಗೆ ಮತ್ತಷ್ಟು ಕೋಪ ಬಂದಿತು. ಅವನು "ನಾಳೆ ಹನ್ನೆರಡಾಣೆ ಹೇಗಾಗುವುದು? ಅಲ್ಲಿ ಕೂದಲೇ ಇಲ್ಲವಲ್ಲ!" ಎಂದ.

ಅನ್ನಪೂರ್ಣೆಯು ಅವನನ್ನು ಶಾಂತಗೊಳಿಸುವ ಇಚ್ಛೆಯಿಂದ "ಹನ್ನೆರಡಾಣೆ ಆಗದಿದ್ದರೆ ಎಂಟಾಣೆ-ಹತ್ತಾಣೆಗಳಾದರೂ ಆಗುವುದಿಲ್ಲವೇ" ಎಂದಳು.

"ಆಗುತ್ತದೆ ಮಣ್ಣು! ಎಂಟಾಣೆ-ಹತ್ತಾಣೆಯದೆಲ್ಲಿಯ ಫ್ಯಾಷನ್? ನರೇಂದ್ರನನ್ನು ಕೇಳು ಬೇಕಾದರೆ? ಇಲ್ಲಿ ಹನ್ನೆರಡಾಣೆಯೇ ಬೇಕು!"

ಆ ದಿನ ಅಮೂಲ್ಯನು ಸರಿಯಾಗಿ ಊಟ ಸಹ ಮಾಡಲಿಲ್ಲ. ಎಲ್ಲವನ್ನೂ ಚೆಲ್ಲಿ, ಎರಚಿ, ಬಿಸಾಡಿ, ಎದ್ದು ಹೊರಟುಹೋದ.

ಅನ್ನಪೂರ್ಣೆಯು "ನಿನ್ನ ಮಗನಿಗೆ ಈ ಕ್ರಾಪ್ ಕತ್ತರಿಸಿಕೊಳ್ಳುವ ಹುಚ್ಚು ಎಂದಿನಿಂದ?" ಎಂದು ಕೇಳಿದಳು.

ಬಿಂದುವು ಘೊಳ್ಳನೆ ನಕ್ಕಳು. ಆದರೆ ಮರುಕ್ಷಣವೇ ಗಂಭೀರಳಾಗಿ ದೀರ್ಘವಾದ ಒಂದು ನಿಟ್ಟುಸಿರನ್ನು ಬಿಟ್ಟು "ಅಕ್ಕಾ! ಮಾತೇನೋ ಸಾಮಾನ್ಯವಾದುದು. ಇದನ್ನು ಕೇಳಿ ನಾನು ನಗುತ್ತಲೂ ಇರುವೆನು, ಆದರೆ

ಭಯದಿಂದ ನನ್ನ ಎದೆಯು ಬಡಿದುಕೊಳ್ಳುತ್ತಿದೆ—ಎಲ್ಲ ವಿಚಾರಗಳೂ ಇದೇ ರೀತಿ ಸುರುವಾಗುವುವು" ಎಂದಳು.

ಅನ್ನಪೂರ್ಣೆಗೂ ಮುಂದೆ ಮಾತನಾಡಲಾಗಲಿಲ್ಲ.

○ ○ ○ ○

ದುರ್ಗಾಪೂಜೆಯು ಸಮಾಪಿಸಿತು. ಆ ಕೇರಿಯ ಜಮಾನ್‌ದಾರರ ಮನೆಯಲ್ಲಿ ಸಾಕಷ್ಟು ಆಮೋದ-ಪ್ರಮೋದಗಳ ಏರ್ಪಾಡಾಗಿದ್ದಿತು. ಎರಡು ದಿನ ಮುಂಚಿತವಾಗಿಯೇ ನರೇಂದ್ರ ಅದರಲ್ಲಿ ಮಗ್ನನಾದ. ಸಪ್ತಮಿಯ ದಿನ ರಾತ್ರಿ ಅಮೂಲ್ಯ ತನ್ನ ಚಿಕ್ಕಮ್ಮನನ್ನು ಪೀಡಿಸತೊಡಗಿದ್ದ. "ಚಿಕ್ಕಮ್ಮಾ! ಅಲ್ಲಿ 'ಯಾತ್ರಾ'* ನಡೆಯುತ್ತಿದೆ. ನೋಡಿಕೊಂಡು ಬರಲು ಹೋಗಲಾ?" ಎಂದ.

ಚಿಕ್ಕಮ್ಮನು "ಆಗುತ್ತಿದೆಯೋ ಅಥವಾ ಆಗುವುದೋ?" ಎಂದು ಕೇಳಿದಳು.

"ರಾತ್ರಿ ಮೂರು ಗಂಟೆಗೆ ಪ್ರಾರಂಭವಾಗುವುದೆಂದು ನರೇಂದ್ರ ಹೇಳುವನು."

"ಅದಕ್ಕಾಗಿ ಈಗಲೇ ಹೋಗಿ, ರಾತ್ರಿಯೆಲ್ಲಾ ಚಳಿಯಲ್ಲಿ ನಡುಗುತ್ತ ಏನು ಮಾಡುವೆ? ಈಗ ಬೇಡ? ನಾಳೆ ನಿನ್ನ ಚಿಕ್ಕಪ್ಪನ ಸಂಗಡ ಹೋಗು, ಒಳ್ಳೆಯ ಸ್ಥಳ ಸಿಗುವುದು" ಎಂದಳು ಬಿಂದೂ.

ಅಮೂಲ್ಯ ಅಳುಮುಖ ಮಾಡಿ "ಬೇಡ, ನೀನು ಈಗಲೇ ಕಳುಹಿಸಿ ಬಿಡು. ಚಿಕ್ಕಪ್ಪ ಹೋಗುವರೊ ಇಲ್ಲವೊ? ಒಂದುವೇಳೆ ಹೋದರೂ ಬಹಳ ಹೊತ್ತಿನಮೇಲೆ ಹೋಗುವರು" ಎಂದ.

"ಮೂರು-ನಾಲ್ಕು ಗಂಟೆಯ ಹೊತ್ತಿಗಲ್ಲವೇ ಪ್ರಾರಂಭ? ಅಷ್ಟು ಹೊತ್ತಿಗೆ ಬೋರನ ಸಂಗಡ ಕಳುಹಿಸಿಕೊಡುವೆನು. ಈಗ ಮಲಗಿಕೋ" ಎಂದಳು ಬಿಂದೂ.

---

*ಸೀನ್—ಸೀನರಿ ಏನೂ ಇಲ್ಲದೆ ಆಡುವ ನಾಟಕಕ್ಕೆ 'ಯಾತ್ರಾ' ಎಂದು ಹೇಳುವ ವಾಡಿಕೆಯುಂಟು ಬಂಗಾಲದಲ್ಲಿ.

ಇಷ್ಟಾದರೂ ಅಮೂಲ್ಯನ ಕೋಪವು ಶಾಂತವಾಗಲಿಲ್ಲ. ಅವನು ಗೋಡೆಯ ಕಡೆಗೆ ಮುಖ ತಿರುಗಿಸಿ ಹಾಸಿಗೆಯ ಒಂದು ಮೂಲೆಯಲ್ಲಿ ಮುದುರಿಕೊಂಡ.

ಬಿಂದುವು ಅವನ ಕೈಹಿಡಿದು ತನ್ನ ಕಡೆಗೆಳೆದಳು. ಆದರೆ ಅವನು ಅವಳ ಕೈಗಳನ್ನು ನೂಕಿ, ಹಾಗೆಯೇ ಕೋಪದಿಂದ ಮಲಗಿದ್ದ. ಬಳಿಕ ಎಲ್ಲರಿಗೂ ಸ್ವಲ್ಪ ನಿದ್ರೆ ಬಂದಂತಾಯಿತು. ಆ ಸಮಯಕ್ಕೆ ಸರಿಯಾಗಿ ಹೊರಗಡೆ ಇದ್ದ ಗಡಿಯಾರದ ಶಬ್ದದಿಂದ ಅಮೂಲ್ಯನ ನಿದ್ರೆಯು ಭಂಗವಾಯಿತು. ಅವನು ಕಿವಿಕೊಟ್ಟು ಕೇಳತೊಡಗಿದ. ಒಂದು, ಎರಡು, ಮೂರು, ನಾಲ್ಕು—ಅವನು ಭರಭರನೆ ಎದ್ದು ಕುಳಿತ. ಗಾಬರಿಯಿಂದ ಚಿಕ್ಕಮ್ಮನನ್ನು ಅಲ್ಲಾಡಿಸಿ ಎಚ್ಚರಿಸಿದ. ''ಏಳು, ಏಳು, ಚಿಕ್ಕಮ್ಮಾ! ಮೂರು-ನಾಲ್ಕು ಹೊಡೆಯಿತು.'' ಹೊರಗಿನ ಗಡಿಯಾರದಲ್ಲಿ ಹೊಡೆಯತೊಡಗಿತು —ಐದು, ಆರು, ಏಳು, ಎಂಟು; ಅಮೂಲ್ಯ ಅಳತೊಡಗಿದ. ''ಗಂಟೆ ಏಳಾಗಿಹೋಯಿತು. ಇನ್ನಾವಾಗ ಹೋಗಲಿ?'' ಎಂದು ಕೂಗಾಡಿದ. ಹೊರಗಿನ ಗಡಿಯಾರವು ಹೊಡೆಯುತ್ತಲೇ ಹೋಗುತ್ತಿತ್ತು. ಒಂಭತ್ತು, ಹತ್ತು, ಹನ್ನೊಂದು, ಹನ್ನೆರಡು! ಹನ್ನೆರಡು ಹೊಡೆದು ಗಡಿಯಾರವು ಸುಮ್ಮನಾಯಿತು. ಅಮೂಲ್ಯನು ತನ್ನ ಮೂರ್ಖತನವನ್ನೂ ತಪ್ಪನ್ನೂ ತಿಳಿದುಕೊಂಡು ಲಜ್ಜಿತನಾಗಿ ಸುಮ್ಮನೆ ಮಲಗಿಕೊಂಡ.

ಕೊಠಡಿಯ ಮತ್ತೊಂದು ಕಡೆಯ ಮಂಚದ ಮೇಲೆ ಮಾಧವನು ಮಲಗಿದ್ದ. ಈ ಕೂಗಾಟದಿಂದ ಅವನಿಗೂ ಎಚ್ಚರಾಯಿತು.

ಅವನು ಜೋರಾಗಿ ನಕ್ಕು '' ಏನಾಯಿತು ಮಗೂ?'' ಎಂದ.

ನಾಚಿಕೆಯಿಂದ ಅಮೂಲ್ಯ ಉತ್ತರ ಕೊಡಲಿಲ್ಲ.

ಬಿಂದುವು ನಗುತ್ತ ''ಅದೆಂತಹ ಗಾಬರಿ? ಈ ದಿನ ಅವನು ನನ್ನನ್ನು ಎಚ್ಚರಿಸಿದಷ್ಟು ಗಾಬರಿಯಿಂದ ಮನೆ-ಮಠಕ್ಕೆ ಬೆಂಕಿ ಹತ್ತಿಸಿಕೊಂಡರೂ ಸಹ ಯಾರೂ ಎಚ್ಚರಿಸುವುದಿಲ್ಲ!'' ಎಂದಳು.

ಅಮೂಲ್ಯನು ನಿಸ್ತಬ್ಧನಾಗಿ ಮಲಗಿರುವುದನ್ನು ಕಂಡು ಅವಳಿಗೆ ಒಂದು ಬಗೆಯ ಕರುಣೆಯುಂಟಾಯಿತು. ಅವಳು "ಅಮೂಲ್ಯ, ಹೋಗು. ಆದರೆ ಯಾರೊಡನೆಯೂ ಜಗಳ-ಕದನವಾಡಬೇಡ !" ಎಂದಳು.

ಬಳಿಕ ಭೈರನನ್ನು ಕರೆದು, ಅವನ ಕೈಲಿ ಲಾಂದ್ರವನ್ನು ಕೊಟ್ಟು, ಅಮೂಲ್ಯನನ್ನು ಅವನೊಡನೆ ಕಳುಹಿದಳು.

ಮರುದಿನ ಬೆಳಿಗ್ಗೆ ಹತ್ತು ಗಂಟೆಗೆ ಅಮೂಲ್ಯನು 'ಯಾತ್ರಾ' ನೋಡಿಕೊಂಡು ಪ್ರಸನ್ನಚಿತ್ತದಿಂದ ಮನೆಗೆ ಹಿಂತಿರುಗಿದ. ಬಂದೊಡನೆಯೇ ಅವನು ಚಿಕ್ಕಪ್ಪನನ್ನು ನೋಡಿ "ಚಿಕ್ಕಪ್ಪಾ, ನೀನು ಹೋಗಲೇ ಇಲ್ಲವೆ ?" ಎಂದ.

"ಹೇಗಿತ್ತು?" ಎಂದು ಕೇಳಿದಳು ಬಿಂದೂ.

"ಚೆನ್ನಾಗಿತ್ತು, ಚಿಕ್ಕಮ್ಮಾ! ಚಿಕ್ಕಪ್ಪಾ, ಈ ದಿನ ಸಾಯಂಕಾಲ ಉತ್ತಮ ನಾಟ್ಯ. ಕಲ್ಕತ್ತೆಯಿಂದ ಇಬ್ಬರು ನರ್ತಕಿಯರು ಬಂದಿರುವರು. ನರೇಂದ್ರನು ಅವರನ್ನು ನೋಡಿ ಬಂದಿರುವನು. ಎಲ್ಲರೂ ಚಿಕ್ಕಮ್ಮನಂತೆಯೇ ಇರುವರು— ನೋಡಲು ಬಹಳ ಚೆನ್ನಾಗಿರುವರು —ಅವರು ನರ್ತನ ಮಾಡುವರು. ಬಾಬೂಜೀಯವರಿಗೂ ಹೇಳಿರುವೆನು " ಎಂದ.

"ಬಹಳ ಒಳ್ಳೆಯದು" ಎಂದು ಮಾಧವ ಘೊಳ್ಳನೆ ನಕ್ಕುಬಿಟ್ಟ.

ಕ್ರೋಧದಿಂದ ಬಿಂದುವಾಸಿನಿಯ ಮುಖವು ಕೆಂಪಗಾಯಿತು. ನಿಮ್ಮ ಶೀಲವಂತ ಮಗನ ಮಾತನ್ನು ಕೇಳಿದಿರಾ?" ಎಂದಳು.

ಬಳಿಕ "ನೀನು ಖಂಡಿತವಾಗಿಯೂ ಅಲ್ಲಿಗೆ ಹೋಗಬಾರದು, ದುಷ್ಟ, ನೀಚ ! ಅವರು ನನ್ನ ಹಾಗೆ ಇರುವರೆಂದು ನಿನಗಾರು ಹೇಳಿದರು ? ನರೇಂದ್ರನೇ ?" ಎಂದು ಅಮೂಲ್ಯನನ್ನು ಬೆದರಿಸಿದಳು.

ಅಮೂಲ್ಯನು ಹೆದರಿಕೆಯಿಂದ " ಅವನೇ ನೋಡಿ ಬಂದವನು" ಎಂದ.

"ಈಗ ನರೇಂದ್ರ ಎಲ್ಲಿ ? ಇರಲಿ, ಅವನು ಬರಲಿ !"

ಮಾಧವನು ನಗೆಯನ್ನು ತಡೆಯುತ್ತ "ಇದೇನು ಹುಚ್ಚಿಯಂತೆ ಕೂಗಾಡುವೆ? ಅಣ್ಣನವರೂ ಕೇಳಿಕೊಂಡಿರುವರು. ಇನ್ನು ಗಲಾಟೆ ಮಾಡಬೇಡ!" ಎಂದ.

ಬಿಂದುವು ಸುಮ್ಮನಾದಳು. ಆದರೆ ಮನದಲ್ಲೇ ಕುದಿಯತೊಡಗಿದಳು.

ಸಾಯಂಕಾಲವಾಗುತ್ತಲೇ ಅಮೂಲ್ಯ ಅನ್ನಪೂರ್ಣೆಯನ್ನು ಪೀಡಿಸ ಲಾರಂಭಿಸಿದ "ಅಕ್ಕಾ! ಅಲ್ಲಿ ನಾಟ್ಯವಾಗುವುದು. ಅದನ್ನು ನೋಡಿ ಕೊಂಡು ಈಗಲೇ ಹಿಂತಿರುಗಿ ಬರುವೆನು" ಎಂದ.

ಅನ್ನಪೂರ್ಣೆಯು ಯಾವುದೋ ಕಾರ್ಯದಲ್ಲಿ ತೊಡಗಿದ್ದಳು. ಅವಳು "ನಿಮ್ಮ ಚಿಕ್ಕಮ್ಮನನ್ನು ಕೇಳು, ಹೋಗು!" ಎಂದಳು.

ಅಮೂಲ್ಯ "ಇಲ್ಲ, ಅಕ್ಕಾ! ಈಗಲೇ ಹಿಂತಿರುಗುವೆನು. ನೀನು ಹೇಳು, ಹೋಗಲೇ?" ಎಂದು ಹಟ ಮಾಡತೊಡಗಿದ.

"ಬೇಡಪ್ಪಾ, ಬೇಡ. ಅವಳು ಬಹಳ ಕೋಪಿಷ್ಟಳು. ಅವಳನ್ನೇ ಕೇಳಿ ಹೋಗಿಬಾ!"

ಅಮೂಲ್ಯ ಅಳಲಾರಂಭಿಸಿದ. ಸೀರೆಯ ತುದಿಯನ್ನು ಹಿಡಿದು ಎಳೆ ಯುತ್ತ "ನೀನು ಚಿಕ್ಕಮ್ಮನೊಡನೆ ಹೇಳಬೇಡ. ನಾನು ನರೇಂದ್ರನೊಡನೆ ಹೋಗುವೆನು—ಬೇಗ ಹಿಂತಿರುಗುವೆನು" ಎಂದ.

"ಸಂಗಡ ಹೋಗುವುದಾದರೆ—" ಎಂದಳು ಅನ್ನಪೂರ್ಣಾ.

ಮಾತು ಮುಗಿಯುವ ಮುಂಚೆಯೇ ಅಮೂಲ್ಯ ಅಲ್ಲಿಂದ ಓಡಿಹೋದ.

ಒಂದು ಗಂಟೆ ಹೊತ್ತಾದ ಬಳಿಕ ಬಿಂದುವು ಮಗನನ್ನು ಹುಡುಕು ತ್ತಿರುವಳೆಂದು ಅನ್ನಪೂರ್ಣೆಗೆ ತಿಳಿಯಿತು. ಅವಳು ಸುಮ್ಮನಿದ್ದಳು. ಆದರೆ ಹುಡುಕಾಟವು ಹೆಚ್ಚಾಗಲು ಅವಳು ಹೊರಗೆ ಬಂದು "ಎಲ್ಲೋ ನಾಟ್ಯ ವಾಗುವುದಂತೆ, ನರೇಂದ್ರನ ಕೂಡ ನೋಡಲು ಹೋಗಿರುವನು. ಈಗಲೇ ಹಿಂತಿರುಗುವುದಾಗಿ ಹೇಳಿ ಹೋಗಿರುವನು. ನೀನು ಹೆದರಬೇಡ" ಎಂದಳು.

ಬಿಂದುವು ಹತ್ತಿರ ಬಂದು "ಹೋಗಲು ಹೇಳಿದವರಾರು? ನೀವೇ?" ಎಂದಳು.

ಅಮೂಲ್ಯನು ಕೇಳದೆಯೇ ಹೊರಟುಹೋದನೆಂದು ಹೇಳುವಷ್ಟು ಅನ್ನಪೂರ್ಣೆಗೆ ಧೈರ್ಯವಾಗಲಿಲ್ಲ. ಅವಳು ಹೆದರುತ್ತ "ಈಗ ಬಂದು ಬಿಡುವನು" ಎಂದಳು.

ಬಿಂದುವಾಸಿನಿಯ ಮುಖ ಪೆಚ್ಚಾಯಿತು. ಅಲ್ಲಿಂದ ಹೊರಟು ಹೋದಳು. ಸ್ವಲ್ಪಹೊತ್ತಿನ ಬಳಿಕ ಅಮೂಲ್ಯ ಹಿಂತಿರುಗಿ ಬಂದ. ಚಿಕ್ಕಮ್ಮನು ಕರೆಯುತ್ತಿರುವಳೆಂದು ತಿಳಿದೊಡನೆಯೇ ಅವನು ಶಬ್ದಮಾಡದೆ ನೆಟ್ಟಗೆ ತನ್ನ ತಂದೆಯ ಹಾಸಿಗೆಯ ಮೇಲೆ ಹೋಗಿ ಸುಮ್ಮನೆ ಮಲಗಿಕೊಂಡ

ದೀಪದ ಬೆಳಕಿನಲ್ಲಿ ಕುಳಿತು, ಕಣ್ಣುಗಳಿಗೆ ಕನ್ನಡಕವನ್ನು ಹಾಕಿಕೊಂಡು ಯಾದವ ಭಾಗವತವನ್ನು ಓದುತ್ತಿದ್ದ. ಶಬ್ದವಾದೊಡನೆಯೇ ತಲೆಯೆತ್ತಿ "ಯಾರದು? ಅಮೂಲ್ಯ!" ಎಂದ.

ಅಮೂಲ್ಯ ಉತ್ತರವೀಯದೆ ಮೌನದಿಂದಿದ್ದ.

ಕಮಲೆಯು ಬಂದು "ಚಿಕ್ಕಮ್ಮ ಕೂಗುತ್ತಿರುವರು ಅಮೂಲ್ಯ!" ಎಂದಳು.

ಅಮೂಲ್ಯನು ತಂದೆಯ ಬಳಿಗೆ ಹೋಗಿ ಅವನನ್ನು ಅಪ್ಪಿಕೊಂಡು "ಬಾಬೂಜೀ, ನೀವೇ ಸ್ವಲ್ಪ ಚಿಕ್ಕಮ್ಮನ ಬಳಿಗೆ ಕರೆದುಕೊಂಡು ಹೋಗಿ" ಎಂದ.

ಯಾದವನು ಆಶ್ಚರ್ಯಚಕಿತನಾಗಿ "ನಾನೇಕೆ ಕರೆದುಕೊಂಡು ಹೋಗಲಿ ಮಗೂ? ಏಕೆ? ಏನಾಯಿತು? ಕಮಲಾ!" ಎಂದು ಕೇಳಿದ.

ಕಮಲೆಯು ವಿಷಯವೆಲ್ಲವನ್ನೂ ವಿಶದವಾಗಿ ತಿಳಿಸಿದಳು.

ಈ ವಿಚಾರವಾಗಿ ಕಲಹವಾಗುವ ಸಂಭವವುಂಟೆಂದು ಯಾದವನು ಅರಿತ ಒಬ್ಬಳು ಬೇಡವೇ ಬೇಡವೆಂದಿರುವಳು! ಇನ್ನೊಬ್ಬಳು ಹೋಗಲು ಅಪ್ಪಣೆ ಕೊಟ್ಟಿರುವಳು!!

ಯಾದವನು ಅಮೂಲ್ಯನನ್ನು ಸಂಗಡ ಕರೆದುಕೊಂಡು ಬಿಂದುವಾಸಿನಿಯ ಕೊಠಡಿಯ ಹೊರಗಡೆ ನಿಂತು "ಈ ಸಲ ಅವನನ್ನು ಮನ್ನಿಸು, ಬಹೂರಾಣೀ! ಇನ್ನುಮುಂದೆ ಹೀಗೆ ಮಾಡುವುದಿಲ್ಲ" ಎಂದು ಹೇಳಿದ.

ಅದೇ ರಾತ್ರಿ ಇಬ್ಬರು ಸೊಸೆಯರೂ ಊಟಮಾಡಲು ಕುಳಿತಾಗ ಬಿಂದುವು "ನನಗೆ ನಿಮ್ಮ ಮೇಲೆ ಏನೂ ಕೋಪವಿಲ್ಲ, ಅಕ್ಕಾ! ಆದರೆ ನನಗೆ ಇಲ್ಲಿರಲು ಆಗುವುದಿಲ್ಲ. ಇಲ್ಲಿದ್ದರೆ ಅಮೂಲ್ಯನು ಕೆಟ್ಟುಹೋಗುವನು, ಹಾಳಾಗಿ ಹೋಗುವನು. ನಾನು ನಾಟ್ಯ ನೋಡಲು ಹೋಗಬೇಡವೆಂದು ಹೇಳದಿದ್ದರೆ, ಆಗ ಮಾತೇ ಬೇರೆಯಾಗುತ್ತಿತ್ತು. ಆದರೆ ಬೇಡವೆಂದರೂ ಸಹ ಕೇಳದೆ ಹೋಗುವಷ್ಟು ದುಃಸಾಹಸವು ಅವನಿಗೆ ಹೇಗೆ ಉಂಟಾಯಿತೆಂಬುದೇ ನನಗ ಯೋಚನೆ! ಅದೂ ಅಲ್ಲದೆ ಅವನ ಹಟದ ಬುದ್ಧಿಯನ್ನು ನೋಡಿದಿರಾ? ನನ್ನ ಬಳಿ ಬರದೆ ನಿಮ್ಮ ಬಳಿ ಬಂದಿದ್ದನು. ಮನೆಗೆ ಹಿಂತಿರುಗಿದ ನಂತರ ನಾನು ಕರೆಯುತ್ತಿರುವೆನೆಂದು ತಿಳಿದೊಡನೆಯೇ ಭಾವನವರ ಬಳಿಗೆ ಹೋಗಿ, ಅವರನ್ನು ಕೂಡ ಕರೆತಂದಿರುವನು! ಇಲ್ಲ ಅಕ್ಕಾ! ಇದುವರೆಗೂ ಹೀಗೆಲ್ಲಾ ಮಾಡುತ್ತಿರಲಿಲ್ಲ. ಇರುವವನೊಬ್ಬ ಮಗ! ಅವನೂ ಕೆಟ್ಟುಹೋದರೆ, ಅವನಿಗಾಗಿ ಜೀವನಿರುವವರೆಗೂ ಕಣ್ಣೀರು ಹರಿಸುತ್ತ ಇರುವುದಕ್ಕಿಂತ ಕಲ್ಕತ್ತೆಯಲ್ಲಿ ಬಾಡಿಗೆಯ ಮನೆಯಲ್ಲಿ ಬೇರೆ ಇರುವುದೇ ಉತ್ತಮವೆಂದು ತೋರುವುದು" ಎಂದಳು.

ಅನ್ನಪೂರ್ಣೆಯು ಉದ್ವಿಗ್ನಳಾದಳು—"ನೀವೆಲ್ಲಾ ಹೊರಟು ಹೋದರೆ ನಾನು ಒಂಟಿಯಾಗಿ ಹೇಗಿರಲಿ ಹೇಳು?" ಎಂದಳು.

ಸ್ವಲ್ಪಹೊತ್ತು ಸುಮ್ಮನಿದ್ದು, ನಂತರ ಬಿಂದುವು "ಅದೆಲ್ಲಾ ನಿಮಗೇ ಗೊತ್ತು. ಹೇಳಬೇಕಾದುವನ್ನು ನಾನು ನಿಮಗೆ ಹೇಳಿಬಿಟ್ಟೆನು. ಈ ನರೇಂದ್ರ ಬಹಳ ಕಿಡಿಗೇಡಿ ಹುಡುಗ!" ಎಂದಳ.

"ಏಕೆ, ನರೇಂದ್ರ ಏನು ಮಾಡಿದ? ಒಂದುವೇಳೆ ಇವರಿಬ್ಬರೂ ಅಣ್ಣ-ತಮ್ಮಂದಿರಾಗಿದ್ದರೆ ಆಗ ಏನು ಮಾಡುತ್ತಿದ್ದೆ?"

''ಹಾಗಿದ್ದರೆ ಅವನ ಕೈಕಾಲುಗಳನ್ನು ಕಟ್ಟಿಸಿ, *'ಜಲ-ಬಿಛುಟಿ' ಯನ್ನು ಹಚ್ಚಿಸಿ, ಮನೆಯಿಂದ ಹೊರಗೆ ನೂಕುತ್ತಿದ್ದೆ. ಅದಿರಲಿ, ಅಕ್ಕಾ! ಆದರೆ-ಗೀದರೆ ಎಂಬ ಲೆಕ್ಕದಿಂದ ಯಾವ ಕೆಲಸವೂ ನಡೆಯುವುದಿಲ್ಲ,— ನೀವು ಅವರನ್ನು ಬಿಟ್ಟುಬಿಡಿರಿ!'' ಎಂದಳು.

ಅನ್ನಪೂರ್ಣೆಯು ಮನದಲ್ಲೇ ನೊಂದುಕೊಂಡು ''ಬಿಡುವುದು ಕಟ್ಟಿ ಕೊಳ್ಳುವುದು, ಎಲ್ಲಾ ನನ್ನ ಕೈಲಿದೆಯೇ ಬಿಂದು? ಯಾರು ಅವರನ್ನು ಕರೆತಂದರೋ, ಅವರೊಡನೆ ಹೋಗಿ ಹೇಳು; ವ್ಯರ್ಥವಾಗಿ ನನ್ನನ್ನು ದೂಷಿಸಬೇಡ'' ಎಂದಳು.

''ಈ ಮಾತನ್ನೆಲ್ಲಾ ಭಾವನವರೊಡನೆ ಹೇಗೆ ಹೇಳಲಿ?"

''ಇತರ ವಿಚಾರಗಳನ್ನು ಹೇಳುವಂತೆಯೇ ಈ ಮಾತನ್ನೂ ತಿಳಿಸು."

ಬಿಂದುವು ಮುಂದಿದ್ದ ತಟ್ಟೆಯನ್ನು ತಳ್ಳಿ ''ಅಕ್ಕಾ! ಇನ್ನೂ ನನ್ನನ್ನು ಏನೂ ಅರಿಯದವಳೆಂದು ತಿಳಿದಿರಾ? ೨೭-೨೮ ವರ್ಷಗಳಾಗುತ್ತ ಬಂತು. ಅದೂ ಅಲ್ಲದೆ ಹೇಳಲು ಮನೆಯ ಆಳು ಮಕ್ಕಳ ಮಾತೇ! ನೆಂಟರಿಷ್ಟರ ಮಾತು! ನೀವು ಜೀವದಿಂದಿರುವಾಗ ನಾನು ಈ ಮಾತನ್ನು ಹೇಳಿದರೆ ಭಾವ ನವರಿಗೆ ಕೋಪ ಬರಲಾರದೇ?" ಎಂದಳು.

''ಕೋಪ ಬರುವುದೇನೋ ನಿಜ; ಆದರೆ ಈ ಮಾತನ್ನು ನಾನು ಹೇಳಿದ್ದೇ ಆದರೆ ಈ ಜನ್ಮವಿರುವವರೆಗೂ ಪುನಃ ನನ್ನ ಮುಖಾವಲೋಕನ ಮಾಡುವುದಿಲ್ಲ! ಎಷ್ಟೇ ಇರಲಿ, ನಾವು ಬೇರೆಯವರು, ಅವರು ಅಣ್ಣ-ತಂಗಿ ಯರು—ಈ ಮಾತನ್ನೇಕೆ ಯೋಚಿಸುವುದಿಲ್ಲ ಬಿಂದೂ? ಅದೂ ಅಲ್ಲದೆ ನಾನು ವಯಸ್ಸಾದವಳು. ಈ ಸಣ್ಣ-ಪುಟ್ಟ ಮಾತಿಗೆಲ್ಲಾ ಕುಣಿದಾಡತೊಡ ಗಿದರೆ ಜನರು ನಗಲಾರರೇ? ಹುಚ್ಚಿ ಎನ್ನಲಾರರೇ?" ಎಂದಳು ಅನ್ನಪೂರ್ಣೆ.

ಬಿಂದುವು ತಟ್ಟೆಯನ್ನು ಮತ್ತಷ್ಟು ದೂರತಳ್ಳಿ ಸುಮ್ಮನೆ ಕುಳಿತಿದ್ದಳು.

ಭಾವನವರ ಭಯಕ್ಕಾಗಿ ಅವಳು ಸುಮ್ಮನಾದಳೆಂದು ಅನ್ನ ಪೂರ್ಣೆಯು ಅರಿತಳು.

---

*ಇದೊಂದು ತರದ ಎಲೆ. ಇದು ಶರೀರಕ್ಕೆ ತಗುಲಿದೊಡನೆಯೇ ಅಸಾಧ್ಯ ವಾದ ತುರಿಯುಂಟಾಗುವುದು. ಕನ್ನಡದಲ್ಲಿ ಈ ಎಲೆಗೆ ''ನಸುಗುನ್ನಿ" ಎನ್ನುವರು.

"ಕೈ-ಕಟ್ಟಿಕೊಂಡು ಸುಮ್ಮನೆ ಕುಳಿತೆಯೇಕೆ? ಊಟದ ತಟ್ಟೆ ಯಾವ ಅಪರಾಧ ಮಾಡಿತು?"

ಬಿಂದುವು ನಿಟ್ಟುಸಿರೆಳೆದು "ಊಟವಾಡಿ ಆಯಿತು" ಎಂದಳು.

ಅನ್ನಪೂರ್ಣೆಯು ಪುನಃ ಒತ್ತಾಯಪಡಿಸಲಿಲ್ಲ.

ಬಿಂದುವಾಸಿನಿಯು ಮಲಗಿಕೊಳ್ಳಲು ಹೋದಳು. ಹಾಸಿಗೆಯ ಮೇಲೆ ಅಮೂಲ್ಯನನ್ನು ಕಾಣದೆ, ಅನ್ನಪೂರ್ಣೆಯ ಬಳಿಗೆ ಹಿಂತಿರುಗಿ ಬಂದು "ಅವನೆಲ್ಲಿ?" ಎಂದು ಕೇಳಿದಳು.

"ನನ್ನ ಹಾಸಿಗೆಯ ಮೇಲೆ ಮಲಗಿರಬಹುದೆಂದು ತೋರುವುದು— ಹೋಗಿ ನೋಡುವೆನು—ಎಚ್ಚರಿಸುವೆನು" ಎಂದಳು ಅನ್ನಪೂರ್ಣಾ.

"ಬೇಡ, ಬೇಡ; ಇರಲಿ!" ಎನ್ನುತ್ತಾ ಬಿಂದುವು ಕೋಪದಿಂದ ಹೊರಟುಹೋದಳು.

ಅರ್ಧರಾತ್ರಿಯ ಸಮಯದಲ್ಲಿ ಅನ್ನಪೂರ್ಣೆಯು ಕೂಗಿದುದರಿಂದ ಬಿಂದುವಿನ ನಿದ್ರೆಯು ಭಂಗವಾಯಿತು. "ಏನು, ಅಕ್ಕಾ!" ಎಂದಳು.

ಅನ್ನಪೂರ್ಣೆಯು ಹೊರಗಿನಿಂದಲೇ "ಬಾಗಿಲು ತೆಗೆ. ನಿನ್ನ ಮಗನನ್ನು ಒಳಗೆ ಕರೆದುಕೊಂಡು ಸ್ವಲ್ಪ ಸುಧಾರಿಸು. ಇಂತಹ ಹುಡುಗನನ್ನು ನಮ್ಮಪ್ಪನಿಂದಲೂ ಸುಧಾರಿಸಲು ಸಾಧ್ಯವಿಲ್ಲ!" ಎಂದಳು.

ಬಿಂದುವು ಬಾಗಿಲು ತೆರೆದಳು. ಅಮೂಲ್ಯನನ್ನು ಒಳಗೆ ಕರೆದುಕೊಂಡಳು. ಅನ್ನಪೂರ್ಣೆಯು "ಇಂತಹ ಹುಡುಗನನ್ನು ನಾನೆಲ್ಲೂ ನೋಡಿಲ್ಲ ಬಿಂದೂ! ರಾತ್ರಿ ಎರಡು ಗಂಟೆಯಾಗುತ್ತ ಬಂತು, ಕಣ್ಣು ಸಹ ಮುಚ್ಚಗೊಡಲಿಲ್ಲ! ಸೊಳ್ಳೆ ಕಚ್ಚುತ್ತದೆ ಎಂದು ಎನ್ನುವನು ಒಮ್ಮೆ. ನೀರು ಕುಡಿಯಬೇಕು ಎಂದು ಎನ್ನುವನು ಮತ್ತೊಮ್ಮೆ. ಅಲ್ಲ, ಬಿಂದೂ! ದಿನವೆಲ್ಲಾ ಕೆಲಸ ಮಾಡಿಮಾಡಿ ಬೇಸತ್ತು, ರಾತ್ರಿಯೂ ನಿದ್ರೆಮಾಡದಿದ್ದರೆ ನಾನು ಉಳಿಯಲಾರೆ!" ಎಂದಳು.

ಬಿಂದುವು ನಗುತ್ತ ಕೈಗಳನ್ನು ಚಾಚಿದೊಡನೆಯೇ ಅಮೂಲ್ಯ ಅವಳ ತೊಡೆಯ ಮೇಲೆ ಬಂದು ಕುಳಿತ ಮತ್ತು ಹಾಗೆಯೇ ಅವಳ ಮೇಲೊರಗಿ

ನಿದ್ರೆಮಾಡಿದ. ಮಾಧವನು ಹಾಸಿಗೆಯ ಮೇಲೆ ಮಲಗಿದ್ದಂತೆಯೇ ತಮಾಷೆ ಮಾಡುತ್ತ "ಇಚ್ಛೆ ಪೂರ್ತಿಯಾಯಿತೆ ಅತ್ತಿಗೆ ?" ಎಂದ.

"ಇಲ್ಲ, ಲಾಲಾ ! ನಾನು ಬಯಸಲಿಲ್ಲ. ಬಿಂದುವಿನ ಭಯಕ್ಕಾಗಿ ತಾನೇ ಅಲ್ಲಿ ಬಂದು ಮಲಗಿಕೊಂಡ. ಆದರೆ ನನಗೆ ಬುದ್ಧಿ ಬಂದಂತಾ ಯಿತು. ಅದೂ ಅಲ್ಲದೆ ನನ್ನ ಬಳಿ ಮಲಗಿಕೊಳ್ಳಲು ನಾಚಿಕೆಯಾಗುವು ದೆಂದು ಬೇರೆ ಹೇಳುವನು" ಎಂದಳು ಅನ್ನಪೂರ್ಣಾ.

ಮೂವರೂ ಘೊಳ್ಳನೆ ನಕ್ಕರು. ಅನ್ನಪೂರ್ಣೆಯು "ಈಗ ಮಾತು ಸಾಕು. ಬಹಳ ರಾತ್ರಿಯಾಯಿತು. ಸ್ವಲ್ಪ ಹೋಗಿ ಮಲಗಿಕೊಳ್ಳುವೆನು" ಎಂದು ಹೇಳಿ ಮಲಗಲು ಹೋದಳು.

o o o o

ಹತ್ತಾರು ದಿನಗಳ ನಂತರ ಬಿಂದುವಾಸಿನಿಯ ಮಾತಾಪಿತೃಗಳು ತೀರ್ಥಯಾತ್ರೆಗೆ ಹೊರಡುವ ಮುಂಚಿತವಾಗಿ ಮಗಳನ್ನು ನೋಡಬೇಕೆಂಬ ಉದ್ದಿಶ್ಯದಿಂದ ಪಲ್ಲಕ್ಕಿಯನ್ನು ಕಳುಹಿಸಿದರು. ಬಿಂದುವು ಅಕ್ಕನವರ ಅನುಮತಿಯನ್ನು ಪಡೆದು, ಅಮೂಲ್ಯನಿಗೆ ಕಾಣದೆ ಕೆಲದಿನಗಳ ಮಟ್ಟಿಗೆ ತಾಯಿಯ ಮನೆಗೆ ಹೋಗಿಬರಲು ಎಲ್ಲ ಸಿದ್ಧತೆಯನ್ನೂ ಮಾಡಿಕೊಳ್ಳ ತೊಡಗಿದಳು. ಆ ಸಮಯಕ್ಕೆ ಸರಿಯಾಗಿ ಅಮೂಲ್ಯ ಪುಸ್ತುಕಗಳನ್ನು ತೆಗೆದುಕೊಂಡು ಸ್ಕೂಲಿಗೆ ಹೋಗಲು ಸಿದ್ಧನಾಗಿ ಬಂದ. ಸ್ವಲ್ಪ ಹೊತ್ತಿನ ಮುಂಚೆ ಹೊರಗಡೆ ಪಲ್ಲಕ್ಕಿ ನಿಲ್ಲಿಸಿರುವುದನ್ನು ನೋಡಿ ಬಂದಿದ್ದ. ಆದರೆ ಈಗ ಚಿಕ್ಕಮ್ಮನ ಕಾಲುಗಳ ಮೇಲೆ ದೃಷ್ಟಿ ಬೀಳುತ್ತಲೇ ಅವನು ಹಾಗೆಯೇ ನಿಂತ. ಚಿಕ್ಕಮ್ಮನನ್ನು ಕುರಿತು "ಕಾಲುಗಳಲ್ಲಿ ಅಲತಿಗೆಯ ರಸವನ್ನು ಏಕೆ ಹಚ್ಚಿಕೊಂಡಿರುವೆ? ಚಿಕ್ಕಮ್ಮಾ!" ಎಂದು ಕೇಳಿದ.

ಅನ್ನಪೂರ್ಣೆಯೂ ಅಲ್ಲೇ ನಿಂತಿದ್ದಳು. ಅವನ ಮಾತನ್ನು ಕೇಳಿ ಅವಳಿಗೆ ನಗೆ ಬಂದಿತು.

"ಈ ದಿವಸ ಹಚ್ಚಿಕೊಳ್ಳಬೇಕು" ಎಂದಳು ಬಿಂದೂ.

ಅಮೂಲ್ಯ ಒಂದೆರಡು ಬಾರಿ ಅವಳನ್ನು ತಲೆಯಿಂದ ಕಾಲವರೆಗೂ ದಿಟ್ಟಿಸಿ "ಇಷ್ಟು ಒಡವೆಗಳನ್ನು ಏಕೆ ಧರಿಸಿರುವೆ ಚಿಕ್ಕಮ್ಮ?" ಎಂದ.

ಅನ್ನಪೂರ್ಣೆಯು ಮುಖದ ಮೇಲೆ ಸೆರಗು ಹಾಕಿಕೊಂಡು ಹೊರಗೆ ಹೋದಳು.

ಬಿಂದುವು ತನ್ನ ನಗೆಯನ್ನು ತಡೆಯುತ್ತ "ನಿನ್ನ ಹೆಂಡತಿ ಬಂದು ಯಾವಾಗ ಇಟ್ಟುಕೊಳ್ಳುವಳೊ! ಅದಕ್ಕಾಗಿ ನಾವು ಒಡವೆ-ವಸ್ತ್ರಗಳನ್ನು ಇಟ್ಟುಕೊಳ್ಳಬಾರದೇನೋ ಅಮೂಲ್ಯ?—ನಡೆ, ನೀನು ಸ್ಕೂಲಿಗೆ ಹೋಗು" ಎಂದಳು.

ಅಮೂಲ್ಯ ಅವಳ ಈ ಮಾತನ್ನು ಕೇಳಿದರೂ ಕೇಳದವನಂತೆ "ಅಕ್ಕ ಇಷ್ಟೇಕೆ ನಗುವರು? ಈ ದಿವಸ ನಾನು ಸ್ಕೂಲಿಗೆ ಹೋಗುವುದಿಲ್ಲ. ನೀನೆಲ್ಲಿಗೆ ಹೋಗುವೆ?" ಎಂದ.

"ಒಂದುವೇಳೆ ಹೋದರೂ ನಿನ್ನ ಅಪ್ಪಣೆಯನ್ನೇನು ಕೇಳಬೇಕೆ?" ಎಂದಳು ಬಿಂದೂ.

"ನಾನೂ ಬರುವೆನು" ಎಂದು ಹೇಳಿ ಅವನು ಪುಸ್ತಕಗಳನ್ನು ತೆಗೆದುಕೊಂಡು ಹೊರಟ.

ಅನ್ನಪೂರ್ಣೆಯು ಕೊಠಡಿಯೊಳಗೆ ಪ್ರವೇಶಿಸಿ "ಏನೂ ತಂಟೆಮಾಡದೆ ಸುಮ್ಮನೆ ಸ್ಕೂಲಿಗೆ ಹೊರಟುಹೋಗುವನೆಂದು ನಾನು ತಿಳಿದಿರಲಿಲ್ಲ! ಆದರೆ ಎಂತಹ ಗಟ್ಟಿಗ ನೋಡಿದೆಯಾ? ಪಾದಕ್ಕೆ ಅಲತಿಗೆಯ ರಸವನ್ನು ಏಕೆ ಹಾಕಿಕೊಂಡಿರುವೆ? ಇಷ್ಟು ಒಡವೆಗಳನ್ನೇಕೆ ಧರಿಸಿರುವೆ?" ಎಂದು ಕೇಳುವನಲ್ಲಾ! ಅವನನ್ನೂ ಸಂಗಡ ಕರೆದುಕೊಂಡು ಹೋಗು ಬಿಂದೂ—ಸ್ಕೂಲಿನಿಂದ ಹಿಂತಿರುಗಿದಾಗ ನಿನ್ನನ್ನು ಕಾಣದಿದ್ದರೆ ಬಹಳ ತಂಟೆ ಮಾಡುವನು" ಎಂದಳು.

"ಅವನು ಸ್ಕೂಲಿಗೆ ಹೊರಟುಹೋದನೆಂದು ತಿಳಿದಿರುವಿರಾ, ಅಕ್ಕಾ! ಸರ್ವಥಾ ಇಲ್ಲ! ಇಲ್ಲೇ ಎಲ್ಲೋ ಬಚ್ಚಿಟ್ಟುಕೊಂಡಿರುವನು, ಸಮಯಕ್ಕೆ ಸರಿಯಾಗಿ ಹಾಜರಾಗುವನು" ಎಂದಳು ಬಿಂದೂ.

ಅವಳು ಹೇಳಿದಂತೆಯೇ ಆಯಿತು. ಎಲ್ಲೋ ಅವಿತುಕೊಂಡಿದ್ದ ಬಿಂದುವು ಅನ್ನಪೂರ್ಣೆಗೆ ನಮಸ್ಕರಿಸಿ ಪಲ್ಲಕ್ಕಿಯಲ್ಲಿ ಕುಳಿತುಕೊಳ್ಳಲು ಹೊರಟಳು. ಅಷ್ಟಕ್ಕೆ ಸರಿಯಾಗಿ ಅಡಗಿಕೊಂಡಿದ್ದ ಅಮೂಲ್ಯ ಎಲ್ಲಿಂದಲೋ ಓಡಿಬಂದು, ಅವಳ ಸೆರಗನ್ನು ಹಿಡಿದು ನಿಂತ. ಇಬ್ಬರೂ ಘೊಳ್ಳನೆ ನಕ್ಕರು.

"ಹೋಗುವ ಸಮಯದಲ್ಲಿ ಈಗ ಹೊಡೆದು-ಬೈದು ಮಾಡಬೇಡ, ಸಂಗಡ ಕರೆದುಕೊಂಡು ಹೋಗು" ಎಂದಳು ಅನ್ನಪೂರ್ಣಾ.

ಬಿಂದುವು "ಇನ್ನು ಕರೆದುಕೊಂಡು ಹೋಗದೆ ಬೇರೆ ಮಾರ್ಗವೇ ಇಲ್ಲ,—ಇವನ ಕಾರಣದಿಂದ ನಾನು ಒಂದು ಹೆಜ್ಜೆ ಸಹ ಆಚೆ-ಈಚೆ ಹೋಗುವಂತಿಲ್ಲ. ಇದು ಒಳ್ಳೆಯ ಕಷ್ಟಕ್ಕೆ ಬಂತು, ಅಕ್ಕಾ!" ಎಂದಳು.

"ಯಾವ ರೀತಿ ನೀನು ಅಭ್ಯಾಸ ಮಾಡಿಸಿರುವೆಯೋ ಹಾಗೆಯೇ ಮಾಡುವನು" ಎಂದು ಅನ್ನಪೂರ್ಣೆಯು ಅಮೂಲ್ಯನ ಕಡೆಗೆ ತಿರುಗಿ "ಮಗೂ, ಇದ್ದುಬಿಡು ನನ್ನ ಬಳಿಯಲ್ಲೇ! ಒಂದೆರಡು ದಿನ ತಾನೇ!" ಎಂದಳು.

ಅಮೂಲ್ಯ ತಲೆಯಲ್ಲಾಡಿಸಿ "ಇಲ್ಲ, ನಿನ್ನ ಹತ್ತಿರ ಇರುವುದಿಲ್ಲ" ಎನ್ನುತ್ತಾ ಓಡಿಹೋಗಿ ಪಲ್ಲಕ್ಕಿಯಲ್ಲಿ ಕುಳಿತುಬಿಟ್ಟ.

೬

ಬಿಂದುವಾಸಿನಿಯು ತವರುಮನೆಯಿಂದ ಹಿಂತಿರುಗಿದಳು. ನಾಲ್ಕಾರು ದಿನಗಳ ನಂತರ ಒಂದು ದಿನ ಮಧ್ಯಾಹ್ನ ಅನ್ನಪೂರ್ಣೆಯು ಅವಳ ಕೊಠಡಿಗೆ ಬಂದು "ಬಿಂದೂ!" ಎಂದಳು.

ಆಗ ಬಿಂದುವು ಮುಂದೆ ಬಟ್ಟೆಯ ರಾಶಿಯನ್ನು ಹಾಕಿಕೊಂಡು ಸ್ತಬ್ಧಳಾಗಿ ಕುಳಿತಿದ್ದಳು!

"ಆಗಸರವನು ಬಂದಿರುವನೇ? ಎಂದಳು ಅನ್ನಪೂರ್ಣಾ.

ಬಿಂದುವು ಉತ್ತರ ಕೊಡಲಿಲ್ಲ, ಸುಮ್ಮನಿದ್ದಳು. ಅನ್ನಪೂರ್ಣೆಯು ಅವಳ ಮುಖವನ್ನು ನೋಡಿ ಉದ್ವಿಗ್ನಳಾದಳು ಅವಳು ಭಯದಿಂದ "ಏನಾಯಿತು ಬಿಂದೂ?" ಎಂದು ಕೇಳಿದಳು.

ಬಿಂದುವು ಉರಿಸಿ ಉಳಿದ ಸಿಗರೇಟಿನ ಸಣ್ಣ ಸಣ್ಣ ತುಂಡುಗಳನ್ನು ತೆಗೆದು ತೋರಿಸುತ್ತ "ಇವು ಅಮೂಲ್ಯನ ಷರಟಿನ ಜೇಬಿನಲ್ಲಿ ದೊರೆತುವು!" ಎಂದಳು.

ಅನ್ನಪೂರ್ಣೆಯು ಭ್ರಾಂತಳಾಗಿ ನಿಂತಲ್ಲಿ ನಿಂತಳು.

ಬಿಂದುವಾಸಿನಿಯು ಅಳುತ್ತಾ "ನಿಮ್ಮ ಕಾಲಿಗೆ ಬೀಳುವೆನು ಅಕ್ಕಾ! ಅವರನ್ನು ಕಳುಹಿಸಿಬಿಡಿರಿ. ಇಲ್ಲದಿದ್ದರೆ ನಮ್ಮನ್ನಾದರೂ ಮತ್ತೆಲ್ಲಾದರೂ ಕಳುಹಿಸಿಬಿಡಿರಿ!" ಎಂದು ದೀನಸ್ವರದಿಂದ ಕೇಳಿಕೊಂಡಳು.

ಏನು ಉತ್ತರ ಕೊಡಬೇಕೆಂಬುದು ಅನ್ನಪೂರ್ಣೆಗೆ ತೋರಲಿಲ್ಲ. ಸುಮ್ಮನೆ ಸ್ವಲ್ಪಹೊತ್ತು ನಿಂತಿದ್ದು, ನಂತರ ಹೊರಟುಹೋದಳು.

ಸಾಯಂಕಾಲ ಅಮೂಲ್ಯ ಶಾಲೆಯಿಂದ ಹಿಂತಿರುಗಿ, ತಿಂಡಿ ತಿಂದು ಆಟವಾಡಲು ಹೊರಟುಹೋದ. ಬಿಂದುವು ಅವನಿಗೆ ಏನನ್ನೂ ಹೇಳಲಿಲ್ಲ. ಸ್ವಲ್ಪ ಹೊತ್ತಿನಲ್ಲೇ ಭೈರನು ಬಂದು "ನರೇಂದ್ರಬಾಬುವು ಕಾರಣವಿಲ್ಲದೆ ಅಮೂಲ್ಯನನ್ನು ಹೊಡೆದಿರುವನು" ಎಂದ.

ಬಿಂದುವು ಕೋಪದಿಂದ "ಅಕ್ಕನವರೊಡನೆ ಹೇಳು, ಹೋಗು" ಎಂದಳು.

ಕೋರ್ಟಿನಿಂದ ಮನೆಗೆ ಬಂದು ಬಟ್ಟೆ ಬದಲಾಯಿಸುತ್ತ ಮಾಧವ ಬಿಂದುವಾಸಿನಿಯೊಡನೆ ಏನೋ ತಮಾಷೆಮಾಡಲು ಹೋದ. ಆದರೆ ಅವಳ ಗರ್ಜನೆಯನ್ನು ಕೇಳಿ ಸುಮ್ಮನಾಗಿಬಿಟ್ಟ. ಕಾಣದಂತೆ ಎಷ್ಟು ಕಾರ್ಮೋಡಗಳು ಗರ್ಜಿಸುತ್ತಿರುವುವೆಂಬುದನ್ನು ಈ ಮನೆಯಲ್ಲಿ ಅನ್ನಪೂರ್ಣೆ ಒಬ್ಬಳು ಮಾತ್ರ ಅರಿತಳು. ಹಾಗೂ ಹೀಗೂ ಉತ್ಕಂಠತೆಯಿಂದ ತಡಪಡಿಸುತ್ತ ಆ ಸಂಜೆಯನ್ನು ಕಳೆದಳು. ನಂತರ ಸಮಯ ನೋಡಿ, ಬಿಂದುವು ಒಬ್ಬಳೆ

ಇದ್ದಾಗ ಅವಳ ಕೈಗಳನ್ನು ಹಿಡಿದುಕೊಂಡು ವಿನಯದಿಂದ '' ಎಷ್ಟೇ ಆಗಲಿ, ಅವನು ನಿನ್ನ ಮಗನೇ! ಈ ಬಾರಿ ಅವನನ್ನು ಕ್ಷಮಿಸಿಬಿಡು. ಬಿಂದೂ, ಆದರೆ ಏಕಾಂತದಲ್ಲಿ ಕರೆದು ಚೆನ್ನಾಗಿ ಗದರಿಸಿ ಬುದ್ಧೀ ಕಲಿಸು" ಎಂದು ಕೇಳಿಕೊಂಡಳು.

'' ಅಮೂಲ್ಯನು ನನ್ನ ಮಗ ಅಲ್ಲವೆಂಬುದು ನನಗೂ ಗೊತ್ತು, ನಿಮಗೂ ಗೊತ್ತು. ಇಷ್ಟಾದರೂ ಸುಳ್ಳು ಸುಳ್ಳು ಮಾತನ್ನು ಬೆಳೆಸುವ ಆವಶ್ಯಕತೆಯಾದರೂ ಏನು ಅಕ್ಕಾ?" ಎಂದಳು ಬಿಂದು.

ಅನ್ನಪೂರ್ಣೆಯು '' ನಾನು ಅವನ ತಾಯಿಯಲ್ಲ, ನೀನೇ ಅವನ ತಾಯಿ. ನಾನು ಅವನನ್ನು ನಿನಗೇ ಕೊಟ್ಟಿರುವೆನು '' ಎಂದಳು.

'' ಚಿಕ್ಕವನಾಗಿದ್ದಾಗ ಅವನನ್ನು ಸಾಕಿ ಸಲಹಿದೆ. ಈಗ ದೊಡ್ಡವನಾದ. ನಿಮ್ಮ ಮಗನನ್ನು ನೀವೇ ತೆಗೆದುಕೊಳ್ಳಿ ನನ್ನನ್ನು ಬಿಡುಗಡೆ ಮಾಡಿರಿ" ಎಂದು ಹೇಳಿ ಬಿಂದುವು ಹೊರಟು ಹೋದಳು.

ರಾತ್ರಿ ಅಳುಮುಖ ಮಾಡಿಕೊಂಡು ಅಮೂಲ್ಯ ಅನ್ನಪೂರ್ಣೆಯ ಬಳಿಗೆ ಮಲಗಲು ಬಂದ.

ಅನ್ನಪೂರ್ಣೆಯು ಒಳಗಿನ ರಹಸ್ಯವನ್ನರಿತಳು. ಅವಳು ಕೋಪವನ್ನು ತೋರ್ಪಡಿಸುತ್ತ '' ಇದೇಕೆ? ನಡೆ ಇಲ್ಲಿಂದ—ಹೇಳುತ್ತಿರುವುದೇನು? ಹೋಗು ಇಲ್ಲಿಂದ!" ಎಂದು ಗದರಿಸಿದಳು.

ಅಮೂಲ್ಯ ತಿರುಗಿ ನೋಡಿದ, ಒಳಗಡೆ ಯಾದವ ಮಲಗಿದ್ದ. ಮರು ಮಾತಾಡದೆ ಅವನು ಮೆಲ್ಲನೆ ಅಲ್ಲಿಂದ ಹೊರಟುಹೋದ.

ಬೆಳಗಾಗುತ್ತಲೇ ಕಮಲೆಯು ಪಾತ್ರೆಗಳನ್ನು ತೊಳೆಯುವುದಕ್ಕೆಂದು ಹೋಗುತ್ತಿದ್ದಳು. ಅಂಗಳದ ಒಂದು ಮೂಲೆಯಲ್ಲಿ ಸೌದೆಯ ಮೇಲೆ ಅಮೂಲ್ಯನು ಮಲಗಿ ನಿದ್ರಿಸುತ್ತಿರುವುದನ್ನು ಕಂಡು ಗಾಬರಿಯಿಂದ ಓಡ್ಡಿ ಹೋಗಿ ಬಿಂದುವನ್ನು ಕರೆತಂದಳು. ಅನ್ನಪೂರ್ಣೆಯೂ ಆಗತಾನೇ ಎದ್ದು ಹೊರಗೆ ಬರುತ್ತಿದ್ದಳು. ಅವಳೂ ಅಲ್ಲಿ ಹೋಗಿ ನಿಂತಳು.

ಬಿಂದುವು ತೀಕ್ಷ್ಣಸ್ವರದಿಂದ "ಬಹುಶಃ ರಾತ್ರಿ ನೀವು ಅವನನ್ನು ಹೊರಗೆ ತಳ್ಳಿರಬಹುದು! ಅವನ ಕಾರಣದಿಂದ ನಿಮ್ಮ ನಿದ್ರೆಯಲ್ಲಿ ತೊಂದರೆ ಯಾಗಬಹುದು ಅಲ್ಲವೇ?" ಎಂದಳು.

ಮಗನ ಸ್ಥಿತಿಯನ್ನು ನೋಡಿ ಅನ್ನಪೂರ್ಣೆಯ ಕಣ್ಣುಗಳಲ್ಲಿ ನೀರು ಹರಿಯತೊಡಗಿತು. ಆದರೆ ಬಿಂದುವಿನ ತಿರಸ್ಕಾರ-ನಿಷ್ಠುರ ವಚನಗಳನ್ನು ಕೇಳಿ ಅವಳಿಗೆ ತಡೆಯಲಾರದ ಕೋಪ ಬಂದಿತು. "ತನ್ನ ತಪ್ಪನ್ನು ಇತರರ ತಲೆಯ ಮೇಲೆ ಹೊರಿಸಿದ ಹೊರತು ನಿನಗೆ ತೃಪ್ತಿಯೇ ಆಗುವುದಿಲ್ಲ, ಅಲ್ಲವೇ?" ಎಂದಳು.

ಬಿಂದುವು ಅಮೂಲ್ಯನನ್ನು ಎತ್ತಲು ಹೋದಳು. ಅವನ ಮೈ ಸುಡು ತ್ತಿದ್ದುದು ಕಂಡುಬಂದಿತು. ಅವನಿಗೆ ಜ್ವರವೇರಿ ಬಂದಿತ್ತು. "ಆಶ್ವ ಯುಜ-ಕಾರ್ತಿಕದ ಹವೆಯಲ್ಲಿ ಜ್ವರವಿದ್ದೇ ಇರುವುದು. ಈ ಬಾರಿ ವಾಸಿ ಯಾದಲ್ಲಿ ಪ್ರಾಣವೇ ಬಂದಂತಾಗುವುದು" ಎಂದಳು ಬಿಂದೂ.

ಅನ್ನಪೂರ್ಣೆಯೂ ಆತುರದಿಂದ "ಜ್ವರ ಬಂದಿರುವುದೇ? – ಎಲ್ಲಿ ನೋಡೋಣ! ಎಂದು ಬಗ್ಗಿದಳು.

ಬಿಂದುವು ಅವಳ ಕೈಗಳನ್ನು ನೂಕಿ "ಸಾಕು. ಇನ್ನೇನೂ ನೋಡ ಬೇಕಾದುದಿಲ್ಲ!" ಎಂದಳು. ಬಳಿಕ ಮಲಗಿದ್ದ ಮಗನನ್ನು ಕಂಕುಳಲ್ಲೆತ್ತಿ ಕೊಂಡು ಅನ್ನಪೂರ್ಣೆಯ ಕಡೆಗೆ ಒಂದು ಬಾರಿ ಕ್ರೂರದೃಷ್ಟಿಯಿಂದ ನೋಡಿ ತನ್ನ ಕೊಠಡಿಗೆ ಹೊರಟು ಹೋದಳು.

ಐದಾರು ದಿನಗಳು ಕಳೆದುವು. ಅಮೂಲ್ಯನ ಜ್ವರವು ನಿಂತಿತು. ಆದರೆ ಬಿಂದುವು ಅನ್ನಪೂರ್ಣೆಯ ಅಪರಾಧವನ್ನು ಕ್ಷಮಿಸಲಿಲ್ಲ. ಆ ದಿನ ದಿಂದ ಅವಳು ಅನ್ನಪೂರ್ಣೆಯೊಡನೆ ಸರಿಯಾಗಿ ಮಾತು ಸಹ ಆಡುವುದಿಲ್ಲ.

ಅನ್ನಪೂರ್ಣೆಯೂ ಮನಸ್ಸಿನಲ್ಲೇ ಎಲ್ಲವನ್ನೂ ತಿಳಿದು ಮೌನದಿಂದಿ ದ್ದಳು. ಎಲ್ಲರೆದುರಿಗೂ ತಪ್ಪನ್ನು ತನ್ನ ತಲೆಯ ಮೇಲೆ ಹೊರಿಸಿದ ಅನ್ಯಾಯವನ್ನೂ ಅವಳು ಮರೆಯಲಿಲ್ಲ. ಒಂದು ದಿನ ಏನೋ ಮಾತಿ ಗಾಗಿ ಅವಳು ಎಲೋಕೇಶಿಯೊಡನೆ "ಆ ದಿನ ಬಿಂದುವಿನ ಕಾರಣದಿಂದಲೇ

ಅಮೂಲ್ಯನಿಗೆ ಜ್ವರವೇರಿ ಬಂತು. ಅವನು ಜೀವದಿಂದ ಉಳಿದುದೇ ಅವಳ ಅದೃಷ್ಟ" ಎಂದಳು.

ಏಲೊಕೇಶಿಯು ಒಡನೆಯೇ ಈ ಮಾತನ್ನು ಬಿಂದುವಿಗೆ ತಿಳಿಸಿದಳು. ಬಿಂದುವು ಧ್ಯಾನಗೊಟ್ಟು ಕೇಳಿದಳು, ಆದರೇನೂ ಹೇಳಲಿಲ್ಲ. ಈ ವಿಷಯವು ಏಲೊಕೇಶಿಯು ವಿನಾ ಮತ್ತಾರಿಗೂ ಗೊತ್ತಾಗಲಿಲ್ಲ ಎಂಬುದನ್ನು ಬಿಂದುವು ಕೇಳಿದಳು. ಬಿಂದುವು ಅನ್ನಪೂರ್ಣೆಯೊಡನೆ ಮಾತನಾಡುವುದನ್ನೇ ನಿಲ್ಲಿಸಿದಳು. ಬಹಳ ದಿವಸಗಳಿಂದಲೂ ಹೊಸಮನೆಗೆ ಸಾಮಾನುಗಳು ಸಾಗಿಸಲ್ಪಡುತ್ತಿದ್ದುವು. ನಾಳೆಯ ದಿನ ಪ್ರಾತಃಕಾಲವೇ ಹೊಸ ಮನೆಗೆ ಹೋಗಬೇಕು. ಯಾದವ ಮಕ್ಕಳೊಡನೆ ಅದೇ ಮನೆಯಲ್ಲಿದ್ದ. ಮಾಧವ ನೊಕದ್ದಮೆಯ ಕೆಲಸಕ್ಕಾಗಿ ಹೊರಗೆ ಹೋಗಿದ್ದ. ಈ ವೇಳೆಯಲ್ಲಿ ಮನೆಯಲ್ಲಿ (ಹಳೆಯ ಮನೆ) ಒಂದು ಘಟನೆ ನಡೆಯಿತು. ಸಾಯಂಕಾಲ ಮಾಸ್ಟರು ಪಾಠ ಹೇಳಲು ಬಂದಿದ್ದರು. ಬಿಂದುವು ಸ್ವಲ್ಪ ಯೋಚಿಸಿ ಅವರನ್ನು ಬಳಿಗೆ ಕರೆದು "ನಾಳೆಯಿಂದ ಆ ಮನೆಯಲ್ಲೇ ಪಾಠ ಹೇಳಿರಿ" ಎಂದಳು.

'ಹಾಗೆಯೇ ಆಗಲಿ" ಎಂದು ಅವರು ಹೊರಡಲನುವಾದರು. ಅಷ್ಟರಲ್ಲಿ ಬಿಂದುವು ಪುನಃ "ನಿಮ್ಮ ವಿದ್ಯಾರ್ಥಿಯು ಓದು-ಬರೆಹದಲ್ಲಿ ಯಾವ ರೀತಿ ಇರುವನು?" ಎಂದು ಕೇಳಿದಳು.

"ಓದು-ಬರೆಹದಲ್ಲೇನೋ ಬಹಳ ಬುದ್ಧಿವಂತ. ಪ್ರತಿವರ್ಷವೂ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣನಾಗುವನು."

"ಅದೇನೋ ಸರಿ! ಆದರೆ ಈಗೀಗ ಸಿಗರೇಟ್ ಸೇದುವುದನ್ನು ಕಲಿತಿರುವನಲ್ಲ?"

ಆಶ್ಚರ್ಯಚಕಿತರಾಗಿ ಮಾಸ್ಟರು "ಸಿಗರೇಟ್ ಸೇದುವುದನ್ನು ಕಲಿತಿರುವನೇ?" ಎಂದರು.

ಮರುಕ್ಷಣವೇ ಅವರು "ಅದರಲ್ಲಿ ಆಶ್ಚರ್ಯವೇನೂ ಇಲ್ಲ. ಹುಡುಗರು ಒಬ್ಬರನ್ನೊಬ್ಬರು ನೋಡಿ ಎಲ್ಲವನ್ನೂ ಕಲಿಯುವರು" ಎಂದರು.

" ಯಾರನ್ನು ನೋಡಿ ಕಲಿತ ? " ಎಂದಳು ಬಿಂದೂ.

ಮಾಸ್ಟರು ಸುಮ್ಮನಿದ್ದರು. ಬಿಂದುವು " ಅವನ ತಂದೆಯವರಿಗೆ ಈ ಮಾತನ್ನು ತಿಳುಹಿಸಿರಿ " ಎಂದಳು.

ಮಾಸ್ಟರು ತಲೆಯಲ್ಲಾಡಿಸಿ " ಹೌದು, ಈಗ ನೆನಪು ಬಂತು ! ಐದಾರು ದಿನಗಳ ಹಿಂದಿನ ಮಾತು. ಸ್ಕೂಲಿನ ರಸ್ತೆಯಲ್ಲಿರುವ ಒಂದು ತೋಟಕ್ಕೆ ನುಗ್ಗಿ, ಅಕಾಲದ ಕಸಿ ಮಾವಿನಕಾಯನ್ನು ಕಿತ್ತು, ಗಿಡಗಳನ್ನೆಲ್ಲಾ ಹಾಳು ಮಾಡಿ, ಮಾಲಿಯನ್ನು ಹೊಡೆದು-ಬಡೆದು ದೊಡ್ಡ ಗಲಾಟೆಯನ್ನು ಎಬ್ಬಿಸಿದ್ದರು " ಎಂದರು.

" ಬಳಿಕ ಏನಾಯಿತು ? "

" ಮಾಲಿಯು ಮುಖ್ಯ ಉಪಾಧ್ಯಾಯರಿಗೆ ತಿಳುಹಿಸಿದ. ಅವರು ಹುಡುಗರಿಗೆ ಹತ್ತು ರೂಪಾಯಿ ಜೂಲ್ಮಾನೆ ವಿಧಿಸಿ, ಆ ರೂಪಾಯಿ ವಸೂಲಾದ ನಂತರ ಅದನ್ನು ಮಾಲಿಗೆ ಕೊಟ್ಟು ಶಾಂತಗೊಳಿಸಿದರು."

ಬಿಂದುವಿಗೆ ಈ ಮಾತಿನಲ್ಲಿ ನಂಬಿಕೆಯಾಗಲಿಲ್ಲ. " ನನ್ನ ಅಮೂಲ್ಯನೂ ಇದ್ದನೇ ? ಅವನಿಗೆ ರೂಪಾಯಿಗಳು ಎಲ್ಲಿಂದ ಸಿಗಬೇಕು ? " ಎಂದು ಕೇಳಿದಳು ಬಿಂದೂ.

" ಆ ವಿಷಯ ಗೊತ್ತಿಲ್ಲ, ಆದರೆ ಅವನೂ ಇದ್ದ. ನಿಮ್ಮ ನರೇಂದ್ರ ಬಾಬುವೂ ಇದ್ದ. ಅಲ್ಲದೆ ಶಾಲೆಯ ಇನ್ನೂ ಮೂರು-ನಾಲ್ಕು ಜನ ದುಷ್ಟ ಹುಡುಗರೂ ಇದ್ದರು ಈ ಮಾತು ನನಗೆ ಮುಖ್ಯೋಪಾಧ್ಯಾಯರಿಂದ ತಿಳಿದುಬಂತು."

" ರೂಪಾಯಿಗಳೂ ವಸೂಲಾದುವೇ ? "

" ಹೌದು, ವಸೂಲಾದುವು."

" ಒಳ್ಳೆಯದು. ಇನ್ನು ನೀವು ಹೊರಡಿರಿ " ಎಂದು ಹೇಳಿ ಬಿಂದುವು ಅಲ್ಲೇ ಕುಳಿತಿದ್ದಳು. ಅವಳ ಬಾಯಿಂದ ಅಸ್ಫುಟ ರೂಪದಲ್ಲಿ ಈ ಮಾತುಗಳು ಹೊರಬಿದ್ದುವು—" ನನಗೆ ಹೇಳದಂತೆ ಅವನಿಗೆ ರೂಪಾಯಿಗಳನ್ನು ಕೊಟ್ಟಿರುವರು ! ಈ ಮನೆಯಲ್ಲಿ ಇಂತಹ ಸಾಹಸವನ್ನು ಯಾರು ಮಾಡಿದರು ? "

ಮೊದಲೇ ಅವಳ ಮನಸ್ಸು ಸರಿಯಾಗಿಲ್ಲ, ಅದರ ಮೇಲೆ ಅಕ್ಕನ ಸಂಗಡ ಮಾತು ಸಹ ಇಲ್ಲ. ಇಂತಹ ಪರಿಸ್ಥಿತಿಯಲ್ಲಿ ಈ ಸಮಾಚಾರವು ಅವಳನ್ನು ಹಿತಾಹಿತ ಜ್ಞಾನಶೂನ್ಯಳನ್ನಾಗಿ ಮಾಡಿತು.

ಅವಳು ಎದ್ದು ಅಡಿಗೆಯ ಮನೆಗೆ ಹೋದಳು. ಅನ್ನಪೂರ್ಣೆಯು ರಾತ್ರಿಯ ಅಡಿಗೆಯನ್ನು ಮಾಡುತ್ತಿದ್ದಳು. ತಲೆಯೆತ್ತಿ ಬಿಂದುವಿನ ಮೋಡ ಕವಿದ ಮುಖವನ್ನು ನೋಡಿದಳು.

ಬಿಂದುವಾಸಿನಿಯು ತೀವ್ರಸ್ವರದಿಂದ ''ಅಕ್ಕಾ, ಈಗ ಕೆಲವು ದಿನಗಳ ಹಿಂದೆ ಅಮೂಲ್ಯನಿಗೆ ದುಡ್ಡೇನಾದರೂ ಕೊಟ್ಟಿರಾ?'' ಎಂದು ಕೇಳಿದಳು.

ಅನ್ನಪೂರ್ಣೆಯು ಹೀಗಾಗುವುದೆಂದು ಶಂಕಿಸಿದ್ದಳು. ಭಯದಿಂದ ಅವಳ ಬಾಯಿ ಒಣಗಿತು. ಮೆಲ್ಲನೆಯ ಧ್ವನಿಯಿಂದ ಅವಳು ''ಯಾರು ಹೇಳಿದರು?" ಎಂದಳು.

ಬಿಂದುವು ''ನನಗೆ ಬೇಕಾದುದು ಆ ಮಾತಲ್ಲ; ಅವನು ಏನೆಂದು ಹೇಳಿ ತೆಗೆದುಕೊಂಡ, ನೀವು ಏನೆಂದು ತಿಳಿದು ಕೊಟ್ಟಿರಿ - ಎಂಬುದು ನನಗೆ ಬೇಕು!" ಎಂದಳು.

ಅನ್ನಪೂರ್ಣೆಯು ಮೌನದಿಂದಿದ್ದಳು.

''ನಾನು ಅವನನ್ನು ಭಯದಲ್ಲಿ ಇರಿಸುವುದು ನಿಮಗೆ ಇಷ್ಟವಿಲ್ಲವೆಂದು ತೋರುವುದು, ಅದರಿಂದಲೇ ಈ ಮಾತನ್ನು ನನ್ನಿಂದ ಮರೆಮಾಚಿರುವಿರಿ. ಅಮೂಲ್ಯನು ಮತ್ತೇನೇ ಮಾಡಿದರೂ ದೊಡ್ಡವರ ಮುಂದೆ ಸುಳ್ಳು ಮಾತ್ರ ಹೇಳಲಾರ. ನೀವು ತಿಳಿದೂ ತಿಳಿದೂ ಕೊಟ್ಟಿರುವಿರಿ, ನಿಜವಷ್ಟೇ?"

''ಹೌದು, ನಿಜ. ಆದರೆ ಈ ಒಂದು ಬಾರಿ ಅವನನ್ನು ಮನ್ನಿಸು ಬಿಂದೂ! ನಾನು ಕ್ಷಮಾಪಣೆ ಬೇಡಿಕೊಳ್ಳುವೆನು."

ಬಿಂದುವಿನ ಹೃದಯದಲ್ಲಿ ಕೋಪ ಹಾಗೂ ಸಂಕಟಗಳ ಅಗ್ನಿಯು ಪ್ರಜ್ವಲಿಸುತ್ತಿತ್ತು. ಅವಳು "ಈ ಒಂದುಸಲ ಮಾತ್ರವೇಕೆ, ಈ ದಿನದಿಂದ ಎಂದೆಂದಿಗೂ ಕ್ಷಮಿಸಿರುವೆನು! ಇನ್ನುಮುಂದೆ ಏನೂ ಹೇಳುವುದಿಲ್ಲ,

ಮಾತು ಸಹ ಆಡುವುದಿಲ್ಲ. ಅವನು ಈ ರೀತಿ ಸ್ವಲ್ಪ ಸ್ವಲ್ಪವಾಗಿ ಕೆಟ್ಟು ಹಾಳಾಗುವುದನ್ನು ನಾನು ಸಹಿಸಲಾರೆ; ಇದರ ಬದಲು ಒಮ್ಮೆಗೇ ಹಾಳಾಗಿ ಹೋದರೂ ಎಷ್ಟೋ ಉತ್ತಮ. ಆದರೆ, ಅಕ್ಕಾ! ನಿಮಗಿಷ್ಟು ಸಾಹಸವೇ?'' ಎಂದಳು.

ಕೊನೆಯ ವಾಕ್ಯವು ಅನ್ನಪೂರ್ಣೆಯ ಹೃದಯವನ್ನು ಇರಿಯಿತು. ಆದರೂ ಅವಳು ಉತ್ತರ ಕೊಡದೆ ಸುಮ್ಮನಿದ್ದಳು. ಬಿಂದುವು ಹೆಚ್ಚು ಹೆಚ್ಚು ಮಾತನಾಡುತ್ತ ಹೋದಂತೆಲ್ಲಾ ಅವಳ ಕ್ರೋಧವೂ ಹೆಚ್ಚುತ್ತ ಹೋಯಿತು. ಬಿಂದುವು ಗಟ್ಟಿಯಾಗಿ ಅರಚುತ್ತ ''ಎಲ್ಲ ವಿಚಾರಗಳಿಗೂ ನೀವು ಏನೂ ಅರಿಯದವರಂತೆ 'ಈ ಸಲ ಮನ್ನಿಸು, ಇದೊಂದು ಸಲ ಕ್ಷಮಿಸು' ಎಂದು ಹೇಳಿಬಿಡುವಿರಿ. ಆದರೆ ನಿಮ್ಮಷ್ಟು ತಪ್ಪು ಅವನದಲ್ಲ. ನಿಮ್ಮನ್ನು ನಾನು ಕ್ಷಮಿಸಲಾರೆ!" ಎಂದಳು.

ಮನೆಯ ಆಳುಮಕ್ಕಳು ಕೂಡ ಮರೆಯಲ್ಲಿ ನಿಂತು ಈ ಮಾತನ್ನು ಕೇಳುತ್ತಿದ್ದರು.

ಅನ್ನಪೂರ್ಣೆಗೆ ಇನ್ನು ತಡೆಯಲಾಗಲಿಲ್ಲ. ಅವಳು ಕ್ರೋಧದಿಂದ ''ಏನು ಮಾಡುವೆ? ಗಲ್ಲಿಗೇರಿಸುವೆಯಾ?" ಎಂದಳು.

ಉರಿಯುವ ಬೆಂಕಿಗೆ ತುಪ್ಪ ಹಾಕಿದಂತಾಯಿತು ಕೋಪದ ಕಿಡಿಗಳನ್ನು ಕಾರುತ್ತ ಬಿಂದುವು ''ನಿಮಗೆ ಸರಿಯಾದ ಶಿಕ್ಷೆ ಅದೇ!" ಎಂದಳು.

''ನನ್ನ ಮಗನಿಗೆ ಎರಡು ರೂಪಾಯಿಗಳನ್ನು ಕೊಟ್ಟದ್ದೇ ದೊಡ್ಡ ಅಪರಾಧವಾಯಿತೇ?"

ಮಾತಿನ ಪ್ರವಾಹದ ಗತಿಯೇ ಬದಲಾಯಿಸಿತು. ಹೇಳಬೇಕಾಗಿದ್ದ ಮಾತುಗಳನ್ನೇ ಮರೆತು ಬಿಂದುವು ಮತ್ತೇನನ್ನೋ ಹೇಳತೊಡಗಿದಳು.

''ಅದನ್ನು ನಾನೇ ಏಕೆ ಕೊಡಬೇಕು? ಹಾಳುಮಾಡಲು ರೂಪಾಯಿಗಳು ಎಲ್ಲಿಂದ ಬಂದುವು?" ಎಂದಳು.

''ನೀನು ಹಾಳುಮಾಡುವುದಿಲ್ಲವೆ?" ಎಂದಳು ಅನ್ನಪೂರ್ಣೆ.

"ನಾನು ಹಾಳು ಮಾಡಿದರೇನು ? ಅವು ನನ್ನ ರೂಪಾಯಿ ! ಆದರೆ ನೀವು ಯಾರ ದುಡ್ಡನ್ನು ಹಾಳುಮಾಡುವಿರಿ ? ಹೇಳಿರಿ ?"

ಈಗಂತೂ ಅನ್ನಪೂರ್ಣೆಯ ಕೋಪವು ಮಿತಿಮೀರಿತು. ಅವಳು ಬಡವರ ಮನೆಯ ಹುಡುಗಿ, ಆದುದರಿಂದ ಬಿಂದುವಾಸಿನಿಯು ಅದನ್ನೇ ಉದ್ದೇಶಿಸಿ ಈ ಮಾತನ್ನಾಡಿದಳೆಂದು ಅನ್ನಪೂರ್ಣೆಯು ಊಹಿಸಿದಳು. ಚಟ್ಟನೆ ಎದ್ದುನಿಂತು ಅವಳು "ನೀನು ದೊಡ್ಡಮನುಷ್ಯರ ಮಗಳೆಂಬುದೇನೋ ನಿಜ. ಆದರೆ ಅಷ್ಟಕ್ಕಾಗಿ ಈ ರೀತಿ ಅಹಂಕಾರವೇಕೆ ? ಮತ್ತೊಬ್ಬರಿಗೆ ಎರಡು ರೂಪಾಯಿ ಸಹ ಕೊಡಲಾರೆನೆಂದು ತಿಳಿದೆಯಾ ?" ಎಂದಳು

"ಅಂತಹ ಅಹಂಕಾರ ನನಗಿಲ್ಲ. ಆದರೆ ನೀವೇ ಯೋಚಿಸಿ ನೋಡಿರಿ ; ನೀವು ಕೊಡುವುದು ಒಂದು ಕಾಸೇ ಆಗಲಿ, ಯಾರದನ್ನು ಕೊಡುವಿರಿ ?" ಎಂದಳು ಬಿಂದೂ.

ಅನ್ನಪೂರ್ಣೆಯು ಗಟ್ಟಿಯಾಗಿ ಅರಚುತ್ತ "ಯಾರ ದುಡ್ಡನ್ನು ಕೊಡುವೆನೆಂಬುದು ನಿನ್ನ ಮಾತಿನಿಂದಲೇ ಸ್ಪಷ್ಟವಾಗುತ್ತಿದೆ ! ನಡೆ, ನನ್ನೆದುರಿಗೆ ನಿಲ್ಲಬೇಡ ; ಮರೆಯಾಗು !" ಎಂದಳು.

ಬಿಂದುವು "ಕಣ್ಮರೆಯಾಗಬೇಕೇ ? ಆಗಲಿ, ಈ ರಾತ್ರಿ ಕಳೆದೊಡನೆಯೇ ಕಣ್ಮರೆಯಾಗುವೆನು. ಆದರೆ ಯಾರ ದುಡ್ಡು ಖರ್ಚುಮಾಡುತ್ತಿರುವಿರೆಂಬುದು ತಿಳಿಯಲಿಲ್ಲ ! ಯಾರ ಸಂಪಾದನೆಯಿಂದ ಉಂಡು-ಉಡುತ್ತಿರುವಿರೆಂಬುದು ಮನಸ್ಸಿಗೆ ಬರಲಿಲ್ಲ, ಅಲ್ಲವೇ ?" ಎಂದಳು.

ಆದರೆ, ನಂತರ ಬಿಂದುವು ಸ್ತಬ್ಧಳಾಗಿ ನಿಂತಳು.

ಅನ್ನಪೂರ್ಣೆಯ ಮುಖವು ಪೆಚ್ಚಾಯಿತು. ಕ್ಷಣಕಾಲ ಅವಳು ಬಿಂದುವಿನ ಮುಖವನ್ನು ದಿಟ್ಟಿಸಿ "ನಿನ್ನ ಪತಿಯ ಸಂಪಾದನೆಯಿಂದ ಉಂಡು-ಉಡುವೆನು. ನಾನು ನಿನ್ನ ದಾಸಿ, ನಿನ್ನ ಗುಲಾಮಳು, ಅವರು ನಿನ್ನ ಆಳುಮಕ್ಕಳು—ಎಂದು ಹೇಳಲು ಅಪೇಕ್ಷಿಸುವೆ, ಅಲ್ಲವೇ ? ಆದರೆ ಇಷ್ಟು ದಿನ ಹೇಳಲಿಲ್ಲವೇಕೆ ?" ಎಂದಳು.

ಅನ್ನಪೂರ್ಣೆಯ ಅಧರಗಳು ಕಂಪಿಸತೊಡಗಿದುವು. ಕ್ಷಣಕಾಲ ತುಟಿಯನ್ನು ಹಲ್ಲಿನಿಂದ ಅದುಮಿರಿಸಿ ನಂತರ "ತನ್ನ ತಮ್ಮನನ್ನು ಓದಿಸುವುದಕ್ಕಾಗಿ ಜೋಡಿ ಪಂಚೆಯನ್ನು ಸಹ ಕೊಂಡುಕೊಳ್ಳದೆ, ಒಂಟಿಯನ್ನೇ ಕೊಂಡು ಕಷ್ಟದಿಂದ ಕಾಲಕಳೆದಾಗ ನೀನೆಲ್ಲಿದ್ದೆ ಬಿಂದೂ? ಮನೆ ಹೊತ್ತಿ ಹೋದಾಗ ಮರಪಡಿ ವಾಸಮಾಡಿಕೊಂಡಿದ್ದು ಈ ಪೈತೃಕ ಗೃಹವನ್ನು ಕಟ್ಟಿಸಿದಾಗ ನೀನೆಲ್ಲಿದ್ದೆ?" ಎನ್ನುತ್ತಾ ಆಕೆಯ ನೇತ್ರಗಳಿಂದ ಟಪಟಪನೆ ಕಂಬನಿಗಳು ಉದುರಿದುವು. ಸೆರಗಿನಿಂದ ಕಣ್ಣೀರೊರೆಸಿಕೊಂಡು ಅವಳು ಪುನಃ "ನಿಮ್ಮ ಮನಸ್ಸಿನ ಮಾತು ಅವರಿಗೆ ತಿಳಿದಿದ್ದರೆ, ಅಫೀಮು ಹಾಗೂ ಹುಕ್ಕವನ್ನು ಸೇದುತ್ತ ಆರಾಮದಿಂದ ಅವರು ಕಾಲ ಕಳೆಯುತ್ತಿರಲಿಲ್ಲ. ಅವರು ಅಂತಹ ಮನುಷ್ಯರಲ್ಲ. ಅವರ ಸ್ವಭಾವವನ್ನು ನಿನ್ನ ಪತಿಯೊಬ್ಬನು ಬಲ್ಲ,—ಸ್ವರ್ಗದ ದೇವತೆಗಳು ಬಲ್ಲರು. ಈ ದಿನ ನನ್ನ ನೆಪದಿಂದ ಅವರ ಅಪಮಾನವನ್ನೂ ಮಾಡಿದೆಯಾ?" ಎಂದಳು.

ಪತಿಯ ಅಭಿಮಾನದಿಂದ ಅನ್ನಪೂರ್ಣೆಯ ಹೃದಯವು ಉಕ್ಕೇರಿ ಬಂತು. ಅವಳು ಪುನಃ "ನೀನು ಈ ಮಾತನ್ನು ಹೇಳಿದುದು ಒಳ್ಳೆಯದೇ ಆಯಿತು. ಇದೋ, ಪ್ರತಿಜ್ಞೆ ಮಾಡುವೆನು. ಇನ್ನುಮುಂದೆ ಇತರರ ಮನೆಯಲ್ಲಿ ಅಡಿಗೆ ಮಾಡಿಯಾದರೂ ಹೊಟ್ಟೆಹೊರೆಯುವೆನು. ಆದರೆ ನಿನ್ನ ಅನ್ನವನ್ನು ಮುಟ್ಟುವುದಿಲ್ಲ! ನೀನು ಮಾಡಿದುದಾದರೂ ಏನು?—ಅವರ ಅಪಮಾನ!" ಎಂದಳು.

ಆ ಸಮಯಕ್ಕೆ ಸರಿಯಾಗಿ ಯಾದವ ಅಂಗಳದಲ್ಲಿ ಬಂದು ನಿಂತು "ಅನ್ನಪೂರ್ಣಾ!" ಎಂದ.

ಪತಿಯ ಕಂಠಸ್ವರವನ್ನು ಕೇಳಿ ಬಿರುಗಾಳಿಯಿಂದ ಕ್ಷುಬ್ಧವಾದ ಸಮುದ್ರದಂತೆ ಆಕೆಯ ಆತ್ಮಾಭಿಮಾನವು ಉನ್ಮತ್ತವಾಯಿತು. ಒಳಗಿನಿಂದ ಓಡಿಬಂದು ಅವಳು "ಛೀ, ಛೀ; ಹೆಂಡತಿ ಮಕ್ಕಳನ್ನು ಸಾಕಲಾರದ ಮನುಷ್ಯರಿಗೆ ಉರುಲು ಹಾಕಿಕೊಳ್ಳಲು ಹಗ್ಗ ಸಹ ದೊರಕುವುದಿಲ್ಲವೇ?" ಎಂದಳು.

ಯಾದವನಿಗೆ ಏನೂ ಅರ್ಥವಾಗಲಿಲ್ಲ. "ಏನಾಯಿತು?" ಎಂದ.

"ಏನಾಯಿತು? ಏನೂ ಇಲ್ಲ. ಬಿಂದುವು ಈ ದಿನ ಸ್ಪಷ್ಟವಾಗಿ ನಾನು ಅವಳ ದಾಸಿಯೆಂದೂ, ನೀವು ಆಕೆಯ ಆಳು—ಮಕ್ಕಳೆಂದೂ ಹೇಳಿರುವಳು."

ಬಿಂದುವು ಮಾತನ್ನು ಕೇಳಲಾರದೆ ಕೈಗಳಿಂದ ಕಿವಿಗಳನ್ನು ಮುಚ್ಚಿ ಕೊಂಡಳು.

ಅನ್ನಪೂರ್ಣೆಯು ಅಳುತ್ತ "ಒಂದು ಕಾಸನ್ನೂ ಸಹ ಕೈಯೆತ್ತಿ ಇತರ ರಿಗೆ ಕೊಡುವ ಹಕ್ಕು ನನಗಿಲ್ಲ,—ನೀವು ಜೀವಂತರಾಗಿದ್ದುಕೊಂಡೂ ಈ ದಿನ ಇಂತಹ ಮಾತನ್ನು ಕೇಳಬೇಕಾಯಿತೇ! ಈ ದಿನ ನಿಮ್ಮೆದುರಿಗೆ ನಿಂತು ಪ್ರತಿಜ್ಞೆ ಮಾಡುತ್ತೇನೆ: ಇವರ ಮನೆಯ ಅನ್ನ ಉಣ್ಣುವುದಕ್ಕಿಂತ ಮೊದಲು ನನ್ನ ಮಗನ ತಲೆ ತಿನ್ನುವುದು ಸಾವಿರ ಪಾಲು ಮೇಲು!"

ಬಿಂದುವು ಕಿವಿಗಳನ್ನು ಮುಚ್ಚಿಕೊಂಡಿದ್ದರೂ ಅನ್ನಪೂರ್ಣೆಯ ಈ ಮಾತುಗಳು ಅಸ್ಪಷ್ಟವಾಗಿ ಕೇಳಿಬಂದುವು. ಅವಳು ಗಾಬರಿಯಿಂದ "ಇದೇನು ಮಾಡಿದಿರಿ ಅಕ್ಕಾ!" ಎಂದಳು.

ಹನ್ನೆರಡು ವರ್ಷಗಳ ನಂತರ ಈ ದಿನ ನಿಂತಲ್ಲಿಯೇ ತಲೆಯೊರಗಿಸಿ ಮೂರ್ಛಿತಳಾಗಿ ಬಿದ್ದುಬಿಟ್ಟಳು!

೭

ಯಾದವ, ಅನ್ನಪೂರ್ಣೆ ಮತ್ತು ಅಮೂಲ್ಯನ ಹೊರತು ಉಳಿದವ ರೆಲ್ಲರೂ ಹೊಸಮನೆಗೆ ಬಂದಿದ್ದರು. ಹೊರಗಿನಿಂದ ಬಿಂದುವಿನ ಅತ್ತೆ, ಅತ್ತೆಯ ಮಗಳು, ತಾಯಿ-ತಂದೆ, ಅವರ ಆಳು ಮಕ್ಕಳು ಮೊದಲಾಗಿ ಎಲ್ಲರೂ ಬಂದಿದ್ದುದರಿಂದ ಮನೆಯು ತುಂಬಿಹೋಗಿತ್ತು. ಹೊಸಮನೆಗೆ ಬಂದ ದಿನ ಮಾತ್ರ ಬಿಂದುವು ಸ್ವಲ್ಪ ಬೇಸರದಿಂದಿದ್ದಳು, ಆದರೆ ಮರುದಿನ ದಿಂದಲೇ ಅವಳ ಭಾವನೆಯು ದೂರವಾಯಿತು. ಕೋಪವು ಶಾಂತವಾದ ಬಳಿಕ ಅನ್ನಪೂರ್ಣೆಯು ಖಂಡಿತವಾಗಿಯೂ ಬರುವಳೆಂದು ಬಿಂದುವು ನಂಬಿದ್ದಳು. ಹೊಸಮನೆಯಲ್ಲಿ ಪೂಜೆಯನ್ನೂ, ಸಮಾರಾಧನೆಯನ್ನೂ ನಡೆಸಲು ಮಾಡಬೇಕಾದ ಏರ್ಪಾಡುಗಳಲ್ಲಿ ಮಗ್ನಳಾದಳು.

ಬಿಂದುವಾಸಿನಿಯ ತಂದೆಯು "ಮಗೂ ನಿನ್ನ ಮಗನೆಲ್ಲಿ? ಕಾಣಿಸುವುದೇ ಇಲ್ಲ!" ಎಂದ.

ಬಿಂದುವು ಸಂಕ್ಷೇಪವಾಗಿ "ಅವನು ಆ ಮನೆಯಲ್ಲಿರುವನು" ಎಂದಳು.

ತಾಯಿಯು "ನಿನ್ನ ಓರಗಿತ್ತಿಗೆ ಬರಲಾಗಲಿಲ್ಲವೆಂದು ತೋರುವುದು" ಎಂದಳು.

"ಇಲ್ಲ" ಎಂದಳು ಬಿಂದೂ.

ತಾಯಿಯು "ಎಲ್ಲರೂ ಇಲ್ಲಿಗೆ ಬಂದುಬಿಟ್ಟರೆ ಅಲ್ಲಿ ಯಾರಿರಬೇಕು? ಪೈತೃಕ ಗೃಹವನ್ನು ಬಿಟ್ಟುಬರುವುದೂ ಸಹ ಸಂಭವವಿಲ್ಲ" ಎಂದಳು.

ಬಿಂದುವಾಸಿನಿಯು ಉತ್ತರವನ್ನೀಯದೆ ಹೊರಟುಹೋದಳು.

ಯಾದವ ನಿತ್ಯವೂ ಸಾಯಂಕಾಲ ಒಂದು ಬಾರಿ ಇಲ್ಲಿ ಬರುವನು. ಹೊರಗಡೆ ಕುಳಿತ, ಮಾತುಕತೆಗಳನ್ನಾಡಿ ಸಮಾಚಾರವನ್ನು ಅರಿತುಕೊಳ್ಳುವನು; ಆದರೆ ಮನೆಯೊಳಕ್ಕೆ ಬರುವುದಿಲ್ಲ. ಗೃಹಪೂಜೆಯ ಮೊದಲನೆಯ ದಿನ ರಾತ್ರಿ ಯಾದವ ಮನೆಯೊಳಗೆ ಹೊಕ್ಕು ಎಲೊಕೇಶಿಯನ್ನು ಕರೆದು ಸಮಾಚಾರಗಳನ್ನು ಕೇಳಿ ತಿಳಿದುಕೊಳ್ಳುತ್ತಿದ್ದ; ಈ ವಿಚಾರ ತಿಳಿದೊಡನೆಯೇ ಬಿಂದುವು ಮರೆಯಲ್ಲಿ ನಿಂತು ಎಲ್ಲವನ್ನೂ ಕೇಳತೊಡಗಿದಳು. ಚಿಕ್ಕಂದಿನಿಂದ ಇದುವರೆಗೂ ಎಷ್ಟು ಪ್ರೀತಿ-ಪ್ರೇಮಗಳಿಂದ ಯಾದವ ಅವಳನ್ನು ಕಾಣುತ್ತಿದ್ದ! ಎಂತಹ ಪ್ರೀತಿ-ವಚನಗಳಿಂದ ಕಲೆಯುತ್ತಿದ್ದ! ಒಂದು ದಿನವಾದರೂ 'ಬಹೂ' ಎಂದು ಕರೆದವನಲ್ಲ. 'ಬಹೂರಾಣೀ' ಎಂದ ಹೊರತು ಆತನ ಮುಖದಿಂದ ಶಬ್ದಗಳೇ ಹೊರಡುತ್ತಿರಲಿಲ್ಲ. ಇದೇ ಯಾದವನೊಡನೆ ಅವಳು ಅನ್ನಪೂರ್ಣೆಯ ವಿಚಾರವಾಗಿ ಎಷ್ಟೋ ಚಾಡಿಗಳನ್ನು ಹೇಳಿದ್ದಳು. ಒಂದು ದಿನವಾದರೂ ಆಕೆಯ ಮಾತುಗಳನ್ನು ಉಪೇಕ್ಷಿಸಿದವನಲ್ಲ ಯಾದವ! ಇದೆಲ್ಲವನ್ನೂ ನೆನೆದು ಈ ದಿನ ಬಿಂದುವಿನ ಹೃದಯವು ಗದ್ಗದಿತವಾಯಿತು. ಯಾದವ ಹೊರಟುಹೋದ. ಅವಳು

ತನ್ನ ಕೊಠಡಿಗೆ ಹೋಗಿ ಸೀರೆಯ ಸೆರಗಿನಿಂದ ಬಾಯನ್ನು ಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅಳತೊಡಗಿದಳು—ಸುತ್ತಲೂ ಮನೆ ತುಂಬ ಜನರು. ಎಲ್ಲಿ ಯಾರು ಕೇಳುವರೋ ಎಂಬ ಹೆದರಿಕೆ!

ಮರುದಿನ ಬೆಳಿಗ್ಗೆ ಬಿಂದುವು ತನ್ನ ಪತಿಯನ್ನು ಕರೆದು "ಹೊತ್ತಾಗುತ್ತ ಬಂತು, ಪುರೋಹಿತರು ಸುಮ್ಮನೆ ಕುಳಿತಿರುವರು;—ಭಾವನವರು ಇನ್ನೂ ಬರಲಿಲ್ಲ!" ಎಂದಳು.

ಮಾಧವ ವಿಸ್ಮಿತನಾಗಿ "ಅವರೇಕೆ ಬರುವರು?" ಎಂದು ಕೇಳಿದ.

ಬಿಂದುವು ಮತ್ತಿಷ್ಟು ವಿಸ್ಮಿತಳಾಗಿ "ಅವರೇಕೆ ಬರುವರು? ಅವರಲ್ಲದೆ ಇವೆಲ್ಲವನ್ನೂ ಮತ್ತಾರು ಮಾಡುವರು?" ಎಂದಳು.

ಮಾಧವನು "ನಾನು ಮಾಡುವೆನು, ಇಲ್ಲದಿದ್ದರೆ ಪ್ರಿಯಬಾಬುಗಳು ಮಾಡುವರು ಅಣ್ಣನವರಿಗೆ ಬರಲಾಗುವುದಿಲ್ಲ" ಎಂದ.

ಬಿಂದುವು ಕೋಪದಿಂದ "ಬರಲಾಗುವುದಿಲ್ಲ—ಎಂದು ಹೇಳಿಬಿಟ್ಟರೆ ಆಯಿತೇ? ಅವರಿದ್ದುಕೊಂಡು ಇದೆಲ್ಲವನ್ನೂ ಮಾಡುವ ಅಧಿಕಾರವು ಇತರರಿಗುಂಟೇ? ಇಲ್ಲ. ಇಲ್ಲ—ಹಾಗಾಗದು, ಅವರ ವಿನಾ ಮತ್ತಾರೂ ಏನನ್ನೂ ಮಾಡಕೂಡದು!" ಎಂದಳು.

ಮಾಧವನು "ಆದರೆ ಇವೆಲ್ಲವನ್ನೂ ನಿಲ್ಲಿಸು. ಅಣ್ಣನವರು ಮನೆಯಲ್ಲಿಲ್ಲ, ಕೆಲಸಕ್ಕೆ ಹೋಗಿರುವರು" ಎಂದ.

"ಇದೆಲ್ಲವೂ ಹಿರಿಯ ಯಜಮಾನಿಯವರ ಕೆಲಸ! ಅವರು ಸಹ ಬರುವುದಿಲ್ಲವೆಂದು ತೋರುವುದು" ಎನ್ನುತ್ತಾ ಬಿಂದುವು ಅಳುಮುಖ ಮಾಡಿಕೊಂಡು ಅಲ್ಲಿಂದ ಹೊರಟುಹೋದಳು. ಪೂಜೆ-ಪುನಸ್ಕಾರ, ಉತ್ಸವ-ಸಮಾರಂಭ, ಊಟ-ಪಾಠ ಎಲ್ಲವೂ ವ್ಯರ್ಥವೆಂದು ಅವಳಿಗೆನಿಸಿತು. ಮೂರು ದಿನಗಳಿಂದ ಅವಳು ಪ್ರತಿಕ್ಷಣವೂ ಭಾವನವರು ಬರುವರು, ಅಕ್ಕ ಬರುವರು, ಅಮೂಲ್ಯನೂ ಬರುವನು ಎಂಬ ವಿಚಾರವನ್ನೇ ಯೋಚಿಸುತ್ತಿದ್ದಳು. ಆದರೆ ಪತಿಯ ಈ ಮಾತಿನಿಂದ ಅವಳ ಆಶೆಯೆಲ್ಲವೂ ನಿರಾಸೆ

ಯಾಯಿತು. ಅಂದಿನ ಸಮಾರಂಭದ ವಿರಾಟ್ ಪರಿಶ್ರಮವೆಲ್ಲವೂ ವ್ಯರ್ಥವೆನಿಸಿದುವು.

ಎಲೋಕೇಶಿಯು ಬಂದು "ಬಿಂದೂ, ಉಗ್ರಾಣದ ಬೀಗದ ಕೈಯನ್ನು ಸ್ವಲ್ಪ ಕೊಡು. ಮಿಠಾಯಿಯವನು ಸಂದೇಶ* ವನ್ನು ತಂದಿರುವನು" ಎಂದಳು

ಬಿಂದುವು ಕ್ಲಾಂತಭಾವದಿಂದ "ಅಲ್ಲೇ ಎಲ್ಲಾದರೂ ಇಡುವಂತೆ ಹೇಳಿರಿ ಅಕ್ಕಾ! ನಂತರ ನೋಡಿಕೊಳ್ಳುವ" ಎಂದಳು.

"ಎಲ್ಲಿರಿಸಲಿ ಬಿಂದೂ? ಕಾಗೆ-ಹದ್ದುಗಳು ಬಾಯಿ ಹಾಕಿದರೆ?"

"ಕಾಗೆ ಹದ್ದುಗಳು ಬಾಯಿ ಹಾಕಿದರೆ ಬಿಸಾಡಿಸಿರಿ!" ಎಂದು ಹೇಳಿ ಅಲ್ಲಿಂದ ಹೊರಟುಹೋದಳು.

ಅತ್ತೆಯು ಬಂದು "ಬಿಂದೂ, ಈ ಸಲ ಎಷ್ಟು ಹಿಟ್ಟನ್ನು ಕಲೆಸುವುದಕ್ಕೆ ಹೇಳಲಿ? ಒಂದಾವರ್ತಿ ಸ್ವಲ್ಪ ಬಂದು ನೋಡು!" ಎಂದಳು.

ಬಿಂದುವು ಮುಖ ಗಂಟಿಕ್ಕಿ "ಎಷ್ಟು ಹಿಟ್ಟು ಕಲೆಸಬೇಕೆಂಬುದು ನನಗೇನು ಗೊತ್ತು? ನೀವೆಲ್ಲರೂ ಇಷ್ಟು ದೊಡ್ಡವರಾಗಿರುವಿರಿ, ನಿಮಗೆ ಗೊತ್ತಿಲ್ಲವೇ?" ಎಂದಳು.

ಅತ್ತೆಯು ಚಕಿತಳಾಗಿ "ಇವಳ ಮಾತುಗಳನ್ನು ಕೇಳಿದೆಯಾ! ಈ ದಿನ ಎಷ್ಟು ಮಂದಿ ಊಟಕ್ಕೆ ಬರುವರೆಂಬುದು ನನಗೇನು ಗೊತ್ತು?" ಎಂದಳು.

ಬಿಂದುವು ಕೋಪದಿಂದ "ಈ ಕೆಲಸವನ್ನೆಲ್ಲಾ ಅಕ್ಕನೇ ನಿಂತು ಮಾಡಿಸುತ್ತಿದ್ದರು. ಅವರನ್ನು ಹೋಗಿ ಕೇಳಿರಿ! ಅಮೂಲ್ಯನ ಉಪನಯನವಾದಾಗ ಊರಿನ ಜನರೆಲ್ಲಾ ಊಟಕ್ಕೆ ಬಂದಿದ್ದರು. ಇಷ್ಟಾದರೂ ಅಕ್ಕ

---

*ಹಾಲಿನಿಂದ ತಯಾರಿಸಿದ ಒಂದು ಮಿಠಾಯಿ. ಇದಕ್ಕೆ 'ಸಂದೇಶ'ವೆನ್ನುರಮ. ಬಂಗಾಲದಲ್ಲಿ ಇದು ಎಲ್ಲ ಮಿಠಾಯಿಗಳಿಗಿಂತಲೂ ಶ್ರೇಷ್ಠವೆಂದು ಪರಿಗಣಿಸಲ್ಪಡುತ್ತದೆ.

ನನ್ನನ್ನು 'ಇದೆಷ್ಟು ಮಾಡಬೇಕು? ಇದೆಲ್ಲಿಡಬೇಕು? ಇದು ಸರಿಯೋ ನೋಡು!' ಎಂದು ಏನೂ ಕೇಳಲಿಲ್ಲ" ಎನ್ನುತ್ತಾ ಅವಳು ಅಲ್ಲಿಂದ ಮತ್ತೊಂದು ಕೊಠಡಿಗೆ ಹೋದಳು. ಅಷ್ಟರಲ್ಲಿ ಕಮಲೆಯು ಬಂದು "ಬಾಬೂಜೀಯವರು ಪೂಜೆಯ ಬಟ್ಟೆಬರೆಗಳನ್ನು—" ಎಂದಳು.

ಅವಳು ಮಾತುಗಳನ್ನು ಪೂರಯಿಸುವುದಕ್ಕಿಂತ ಮುಂಚೆಯೇ ಬಿಂದುವಾಸಿನಿಯು ಗರ್ಜಿಸುತ್ತ "ನನ್ನ ಪ್ರಾಣವನ್ನು ತೆಗೆದುಬಿಡಿರಿ, ನೀವೆಲ್ಲರೂ ಸೇರಿ ನನ್ನ ಪ್ರಾಣವನ್ನು ಹಿಂಡಿಬಿಡಿರಿ! ನಡೆ, ನನ್ನ ಕಣ್ಣೆದುರಿಗೆ ನಿಲ್ಲಬೇಡ!" ಎಂದಳು.

ಕಮಲೆಯು ಗಾಬರಿಗೊಂಡು ಒಂದು ಕ್ಷಣವೂ ಅಲ್ಲಿ ನಿಲ್ಲದೆ ಹೊರಟು ಹೋದಳು.

ಸ್ವಲ್ಪಹೊತ್ತಿನ ನಂತರ ಮಾಧವನು ಬಂದು ಬಿಂದುವಾಸಿನಿಯನ್ನು ಕೂಗಿ "ಎಲ್ಲಿ ಹೋದೆ? ಸ್ವಲ್ಪ ಬಾ!" ಎಂದ.

ಬಿಂದುವು ಹತ್ತಿರ ಬಂದು "ನನ್ನಿಂದ ಆಗುವುದಿಲ್ಲ. ನಾನು ಮಾಡಲಾರೆ, ಮಾಡಲಾರೆ!" ಎಂದಳು.

ಮಾಧವ ಚಕಿತನಾಗಿ ಅವಳ ಮುಖವನ್ನು ನೋಡತೊಡಗಿದ!

ಬಿಂದುವು "ಏನು ಮಾಡುವಿರಿ? ಗಲ್ಲಿಗೇರಿಸುವಿರಾ?—ಒಳ್ಳೆಯದು, ಹಾಗೂ ಮಾಡಿರಿ—" ಎಂದು ಹೇಳಿ ಅಳುತ್ತಾ ಅಲ್ಲಿಂದ ಹೊರಟು ಹೋದಳು. ಹೊತ್ತೇರುತ್ತ ಬಂತು.

ಬಿಂದುವು ತಡಪಡಿಸುತ್ತ, ಅಲ್ಲಿಂದ ಇಲ್ಲಿ, ಇಲ್ಲಿಂದ ಅಲ್ಲಿ ತಿರುಗಾಡುತ್ತ ರೂಮಿನಿಂದ ರೂಮಿಗೆ ಹೋಗುತ್ತ, ಎಲ್ಲರೂ ಮಾಡುತ್ತಿರುವ ಕೆಲಸಗಳಲ್ಲಿ ತಪ್ಪನ್ನು ಹುಡುಕುತ್ತ ಓಡಾಡುತ್ತಿದ್ದಳು. ತಿರುಗಾಡುವ ರಸ್ತೆಯಲ್ಲಿ ಯಾರೋ ಅವಸರದಲ್ಲಿ ಪಾತ್ರೆಯನ್ನಿಟ್ಟಿದ್ದರು, ಬಿಂದುವು ಅದನ್ನು ಎಳೆದು ಅಂಗಳದಲ್ಲಿ ಬಿಸಾಡಿದಳು. ಒಣಗುಹಾಕಿದ್ದ ಯಾರದೋ ಪಂಚೆಯು ಗಾಳಿಯಿಂದ ಹಾರಿ ಅವಳ ಮೈಮೇಲೆ ಬಿದ್ದಿತು, ಅವಳು ಅದನ್ನು ಚೂರು

ಚೂರಾಗಿ ಹರಿದು ಬಿಸಾಡಿದಳು. ಅವಳ ಎದುರಿಗೆ ಬಂದವರೆಲ್ಲಾ ಭಯದಿಂದ ದೂರ ಸರಿದು ನಿಲ್ಲುತ್ತಿದ್ದರು.

ಬಳಿಕ ಪುರೋಹಿತನು ತಾನೇ ಒಳಗೆ ಬಂದು "ಹೊತ್ತಾಗುತ್ತ ಬಂತು, ಇನ್ನೂ ಪೂಜೆಯ ಸಿದ್ಧತೆಗಳೇ ನಡೆದಿರುವಂತೆ ಕಂಡುಬರುವುದಿಲ್ಲ—" ಎಂದ.

ಬಿಂದುವು ಮರೆಯಲ್ಲೇ ನಿಂತು ಬಿರುನುಡಿಯಿಂದ ''ಕೆಲಸ-ಕಾರ್ಯಗಳಿರುವ ಮನೆಯಲ್ಲಿ ಹೊತ್ತಾಗಿಯೇ ಆಗುವುದು'' ಎಂದು ಹೇಳಿ, ಕಾಲಿಗಡ್ಡವಾಗಿ ಸಿಕ್ಕಿದ ಒಂದು ಪಾತ್ರೆಯನ್ನು ದೂರ ಒದ್ದು, ಮತ್ತೊಂದು ಕೊಠಡಿಗೆ ಹೋಗಿ ನಿರ್ಜೀವಳಂತೆ ನೆಲದ ಮೇಲೆ ಬಿದ್ದುಕೊಂಡಳು. ನಾಲ್ಕಾರು ನಿಮಿಷಗಳನಂತರ ಅತ್ಯಂತ ಪರಿಚಿತವಾದ ಒಂದು ಕಂಠಧ್ವನಿಯು ಕೇಳಿಬರಲು ಅವಳು ಚಟ್ಟನೆದ್ದಳು. ಬಾಗಿಲಿಂದ ಇಣಿಕಿ ನೋಡಲಾಗಿ ಅನ್ನಪೂರ್ಣೆಯು ಅಂಗಳದಲ್ಲಿ ಬಂದು ನಿಂತಿದ್ದಳು.

ಬಿಂದುವು ದುಃಖ ಮತ್ತು ಅಭಿಮಾನಗಳಿಂದ ಹರಿಯುತ್ತಿದ್ದ ಕಣ್ಣೀರನ್ನು ಒರೆಸಿಕೊಂಡು, ಸೀರೆಯ ಸೆರಗನ್ನು ಕೊರಳಸುತ್ತ ಹಾಕಿ ಕೈಜೋಡಿಸಿ ಅನ್ನಪೂರ್ಣೆಯ ಮುಂದೆ ನಿಂತು "೧೦-೧೧ ಗಂಟೆಯಾಗುತ್ತ ಬಂತು, ಇನ್ನೂ ಎಷ್ಟು ವೈರವನ್ನು ತೋರಬೇಕೆಂದಿರುವಿರಿ ಅಕ್ಕಾ! ನಾನು ವಿಷ ಕುಡಿದು ಪ್ರಾಣಬಿಡುವುದರಿಂದ ನಿಮ್ಮ ಇಷ್ಟಾರ್ಥವು ಪೂರ್ತಿಯಾಗುವುದಾದರೆ ಹಾಗೆಯೇ ಮಾಡಿರಿ. ಮನೆಗೆ ಹೋಗಿ ಒಂದು ಬಟ್ಟಲಿನ ತುಂಬ ವಿಷವನ್ನು ಕೊಟ್ಟು ಕಳುಹಿಸಿರಿ!" ಎಂದು ಹೇಳಿ ಬೀಗದಕೈ ಗೊಂಚಲನ್ನು ಅವಳ ಕಾಲುಗಳ ಬಳಿ ಹಾಕಿದಳು. ನಂತರ ತನ್ನ ಕೊಠಡಿಗೆ ಹೋಗಿ ಬಾಗಿಲನ್ನು ಮುಚ್ಚಿ ನೆಲದ ಮೇಲೆ ಬಿದ್ದುಕೊಂಡು ಅಳತೊಡಗಿದಳು.

ಅನ್ನಪೂರ್ಣೆಯು ಏನೂ ಮಾತನಾಡದೆ ಬೀಗದ ಕೈಗೊಂಚಲನ್ನು ತೆಗೆದುಕೊಂಡು ಬಾಗಿಲನ್ನು ತೆರೆದು ಉಗ್ರಾಣವನ್ನು ಪ್ರವೇಶಿಸಿದಳು.

ಸಾಯಂಕಾಲ ಊಟಮಾಡುವವರೂ ಬಂದು-ಹೋಗುವವರೂ ಮನೆತುಂಬ ಕಿಕ್ಕಿರಿದು ಹೋಗಿದ್ದರು. ಇಷ್ಟಾದರೂ ಬಿಂದುವು ಮಾತ್ರ

ಯಾವ ಕಾರಣದಿಂದಲೋ ಅಸ್ಥಿರಳಾಗಿ ಒಳಗಿನಿಂದ ಹೊರಗೆ, ಹೊರಗಿನಿಂದ ಒಳಕ್ಕೆ ಓಡಾಡುತ್ತಿದ್ದಳು.

ಅಷ್ಟರಲ್ಲಿ ಭೈರನು ಬಂದು "ಅಮೂಲ್ಯಬಾಬು ಸ್ಕೂಲಿನಲ್ಲಿ ಇಲ್ಲ" ಎಂದ

ಬಿಂದುವು ಕೋಪದ ಕಿಡಿಗಳನ್ನು ಕಾರುತ್ತ "ಮೂರ್ಖ! ಹುಡುಗರು ರಾತ್ರಿಯವರೆಗೂ ಸ್ಕೂಲಿನಲ್ಲಿರುವರೇ? ನೀನೇನು ಹೊಸಬನೇ? ಒಂದು ಸಲ ಆ ಮನೆಗೆ ಹೋಗಿ ನೋಡಿಬರಲಾಗಲಿಲ್ಲವೇ?" ಎಂದಳು.

"ಆ ಮನೆಯಲ್ಲೂ ಇಲ್ಲ" ಎಂದ ಭೈರ.

ಬಿಂದುವು ಮತ್ತಷ್ಟು ಕೋಪ ಮತ್ತು ದುಃಖದಿಂದ "ಯಾವ ದುಷ್ಟ ಹುಡುಗರ ಸಂಗಡ ಎಲ್ಲಿ ಗಿಲ್ಲಿ-ದಾಂಡನ್ನು ಆಡುತ್ತಿರುವನೋ! ಈಗ ಅವನಿಗೆ ಭಯವಾದರೂ ಯಾರದಿದೆ? ಎಂದಾದರೂ ಒಂದುದಿನ ಕಣ್ಣುಗುಡ್ಡೆ ಒಡೆದರೆ ಆಗ ಹಿರಿಯ ಯಜಮಾನಿಯವರಿಗೆ ಮನಸ್ಸಂತೋಷವಾಗುವುದು! ನೀನು ಹೋಗು, ಅವನೆಲ್ಲಿದ್ದರೂ ಹುಡುಕಿ ಕರೆದುಕೊಂಡು ಬಾ!" ಎಂದಳು.

ಅನ್ನಪೂರ್ಣೆಯು ಉಗ್ರಾಣದ ಮನೆಯ ಅಂಗಳದಲ್ಲಿ ಕುಳಿತು ನಾಲ್ಕಾರು ಜನ ಮುದುಕಿಯರೊಡನೆ ಮಾತನಾಡುತ್ತಿದ್ದಳು. ಬಿಂದುವಿನ ತೀಕ್ಷ್ಣಸ್ವರವು ಅವಳಿಗೆ ಕೇಳಬಂದಿತು.

ಒಂದು ಗಂಟೆಯು ಹೊತ್ತಾದನಂತರ ಭೈರನು ಹಿಂತಿರುಗಿ "ಅಮೂಲ್ಯಬಾಬು ಮನೆಯಲ್ಲಿರುವರು. ಆದರೆ ಬರುವುದಿಲ್ಲ" ಎಂದ.

ಬಿಂದುವಿಗೆ ಅವನ ಮಾತಿನಲ್ಲಿ ನಂಬಿಕೆಯಾಗಲಿಲ್ಲ.

"ಬರುವುದಿಲ್ಲವೇ, ನಾನು ಕರೆಯುತ್ತಿರುವೆನೆಂದು ಹೇಳಿದೆಯಾ?"

"ಹೇಳಿದೆ. ಆದರೂ ಬರಲಿಲ್ಲ."

ಬಿಂದುವು ಕ್ಷಣಕಾಲ ಸ್ತಬ್ಧಳಾಗಿ ನಿಂತಿದ್ದು ಪುನಃ "ಅವನ ದೋಷವಾದರೂ ಏನು? ತಾಯಿಯಂತೆ ಮಗ! ಇನ್ನುಮುಂದೆ ಇಂತಹ ತಾಯಿ-

ಮಕ್ಕಳ ಮುಖ-ದರ್ಶನ ಮಾಡುವುದಿಲ್ಲವೆಂದು ಪ್ರತಿಜ್ಞೆ ಮಾಡಿರುವೆನು!'' ಎಂದಳು.

ರಾತ್ರಿ ಬಹಳ ಹೊತ್ತಾದನಂತರ ಅನ್ನಪೂರ್ಣೆಯು ಮನೆಗೆ ಹೊರಡಲನುವಾದಳು. ಮಾಧವ ಆಕೆಯನ್ನು ತಲಪಿಸಿ ಬರಲು ಸಿದ್ಧನಾದ. ಬಿಂದುವು ಆತುರದಿಂದ ಅವನ ಬಳಿ ಓಡಿಬಂದು ಭೀಷಣ ಧ್ವನಿಯಿಂದ ''ತಲಪಿಸಿ ಬರಲು ಮಾತ್ರ ಹೊರಟುಬಿಟ್ಟಿರಲ್ಲಾ, ಅವರು ಒಂದು ತೊಟ್ಟು ನೀರನ್ನು ಸಹ ಕುಡಿದಿಲ್ಲವೆಂಬುದು ಗೊತ್ತೇ?'' ಎಂದಳು.

''ಅದು ನಿನಗೆ ಗೊತ್ತಾಗತಕ್ಕ ವಿಷಯ,—ನನಗಲ್ಲ. ಈ ದಿನದ ಕಾರ್ಯವೆಲ್ಲವೂ ಕೆಟ್ಟುಹೋಗುತ್ತಿರುವುದನ್ನು ಕಂಡು ನಾನೇ ಹೋಗಿ ಅವರನ್ನು ಕರೆತಂದೆನು, ಈಗ ಹೋಗಿ ತಲಪಿಸಿ ಬರುವೆನು'' ಎಂದ ಮಾಧವ.

ಬಿಂದುವು ''ಸರಿ, ಒಳ್ಳೆಯದು. ನೀವೂ ಸಹ ಅವರ ಕಡೆಗೇ ಮಾತನಾಡುವಿರಿ!" ಎಂದಳು.

ಮಾಧವ ಬಿಂದುವಿನ ಮಾತಿಗೆ ಉತ್ತರ ಕೊಡದೆ ಅನ್ನಪೂರ್ಣೆಯನ್ನು ಕುರಿತು ''ಅತ್ತಿಗೆ, ಇನ್ನು ಹೊತ್ತಾಗುವುದು ಹೊರಡೋಣ'' ಎಂದ.

''ಹೊರಡು ಲಾಲಾ!'' ಎಂದು ಅನ್ನಪೂರ್ಣೆಯು ಹೆಜ್ಜೆಯನ್ನು ಮುಂದಿಡುವಷ್ಟರಲ್ಲೇ ಬಿಂದುವು ಗರ್ಜಿಸುತ್ತ "ಮನೆಯ ಶತ್ರು! ಎಂದು ಜನರು ಒಂದು ಗಾದೆಯ ಮಾತು ಹೇಳುವುದುಂಟು, ಹಾಗಾಯಿತು. ಹತ್ತಾರು ಸುಳ್ಳು-ಪೊಳ್ಳುಗಳನ್ನು ಸೇರಿಸಿ ಬಾಯಿಗೆ ಬಂದಂತೆ ಮಾತನಾಡಿದಿರಿ—ಕ್ರೋಧದಿಂದ ಹಲ್ಲು ಹಲ್ಲು ಕಡಿಯುತ್ತ ಪ್ರತಿಜ್ಞೆಗಳನ್ನು ಮಾಡಿದಿರಿ—ನಾಲ್ಕು ದಿನಗಳು—ಹಗಲು-ರಾತ್ರಿ—ಮಗನ ಮುಖ ಸಹ ನೋಡಗೊಡಲಿಲ್ಲ! ಪರಮಾತ್ಮನೇ ಇದರ ತೀರ್ಮಾನ ಮಾಡುವನು'' ಎಂದು ಉಕ್ಕಿ ಬರುತ್ತಿದ್ದ ಅಳುವನ್ನು ತಡೆಯುವುದಕ್ಕಾಗಿ ಸೀರೆಯ ಸೆರಗಿನಿಂದ ಬಾಯನ್ನು ಮುಚ್ಚಿಕೊಂಡು, ಅಡಿಗೆಯ ಮನೆಗೆ ಹೋಗಿ ನೆಲದ ಮೇಲೆ ಬಿದ್ದುಕೊಂಡಳು; ಒಡನೆಯೇ ಪ್ರಜ್ಞೆ ತಪ್ಪಿತು. ಮನೆಯಲ್ಲೆಲ್ಲಾ ಗಲಿ

ಬಿಲಿ ಸುರುವಾಯಿತು. ಮಾಧವ ಮತ್ತು ಅನ್ನಪೂರ್ಣೆಯರಿಗೂ ಈ ಗಲಿಬಿಲಿ ಕೇಳಿಬಂತು. ಅನ್ನಪೂರ್ಣೆಯು ತಿರುಗಿನಿಂತು "ಏನಾಯಿತು, ನೋಡೋಣ!" ಎಂದಳು.

"ನೋಡುವ ಆವಶ್ಯಕತೆ ಇಲ್ಲ, ನಡೆಯಿರಿ!" ಎಂದ ಮಾಧವ.

ಕಲಹದ ಮಾತು ಇಷ್ಟು ದಿನಗಳವರೆಗೆ ಗುಪ್ತವಾಗಿತ್ತು. ಆದರೆ ಎಲ್ಲವೂ ಈಗ ಬಯಲಾಯಿತು. ಮರುದಿನ ಮನೆಯ ಹೆಂಗಸರೆಲ್ಲರೂ ಒಂದು ಸ್ಥಳದಲ್ಲಿ ಸೇರಿದರು. ಆಗ ಏಲೋಕೇಶಿಯು "ಓರಗಿತ್ತಿಯರಲ್ಲಿ ಜಗಳವಾದರೆ ಮಗನಿಗೇನಾಯ್ತು? ಒಂದು ಸಲ ಇಲ್ಲಿಗೆ ಬರಲು ಸಹ ಆಗಲಿಲ್ಲನೇ? ತಾಯಿಯಂತೆಯೇ ಮಗನೆಂದು ಬಿಂದುವಾಸಿನಿಯು ಹೇಳಿದುದು ಸುಳ್ಳಲ್ಲ. ನಾನೂ ಎಷ್ಟೆಷ್ಟೋ ಹುಡುಗರನ್ನು ನೋಡಿರುವೆನು, ಆದರೆ ಇಂತಹ ಕೃತಘ್ನನನ್ನು ಎಲ್ಲೂ ನೋಡಲಿಲ್ಲ" ಎಂದಳು.

ಬಿಂದುವು ಒಮ್ಮೆ ಕ್ಲಾಂತದೃಷ್ಟಿಯಿಂದ ಅವಳ ಕಡೆಗೆ ನೋಡಿ ನಾಚಿಕೆ ಮತ್ತು ತಿರಸ್ಕಾರದಿಂದ ತಲೆತಗ್ಗಿಸಿದಳು. ಏಲೋಕೇಶಿಯು ಪುನಃ "ಬಿಂದೂ, ನಿನಗೆ ಮಗನು ಬೇಕಾಗಿದ್ದಲ್ಲಿ ನನ್ನ ನರೇಂದ್ರನಾಥನನ್ನು ತೆಗೆದುಕೋ, — ನಿನಗೆ ಅವನನ್ನು ಕೊಟ್ಟುಬಿಡುವೆನು. ಹೊಡೆದರೂ ಸರಿಯೆ, ಬಡೆದರೂ ಸರಿಯೆ, ಕತ್ತರಿಸಿದರೂ ಸರಿಯೆ—ಮರುಮಾತಾಡುವವನಲ್ಲ. ಅಂತಹ ಪುತ್ರನಿಗೆ ನಾನು ಜನ್ಮ ಕೊಡಲಿಲ್ಲ, ಬಿಂದೂ!" ಎಂದಳು

ಬಿಂದುವು ಏನನ್ನೂ ಹೇಳದೆ ಸುಮ್ಮನೆ ಕುಳಿತಿದ್ದಳು. ಬಿಂದುವಿನ ತಾಯಿಯು ಉತ್ತರವಿತ್ತಳು. "ಆಕೆ ವಯಸ್ಸಾದವಳು, ಜಮೀನುದಾರರ ಮನೆಯ ಮಗಳು ಅಲ್ಲದೆ ಜಮೀನುದಾರರ ಗೃಹಿಣಿ; ಬಹಳ ಅನುಭವವುಳ್ಳವಳು" ಎಂದು ಏಲೋಕೇಶಿಯ ಮಾತನ್ನು ಕೇಳಿ ನಕ್ಕು ಅವಳು "ಇದೆಂತಹ ಮಾತನ್ನಾಡುವೆ? ಅಮೂಲ್ಯನು ಅವಳ ಶರೀರದ ರೋಮರೋಮದಲ್ಲಿಯೂ ವ್ಯಾಪಿಸಿರುವನು. ನೀವುಗಳು ಅವಳನ್ನು ವ್ಯಾಕುಲಗೊಳಿಸಬೇಡಿ. ಬಿಂದೂ, ನಿನ್ನ ಜಗಳ—ಕೇವಲ ಎರಡು ದಿನದ ಜಗಳ. ಇದಕ್ಕಾಗಿ ಮಗನು ಬೇರೆಯವನಾಗುವನೇ?" ಎಂದಳು.

ಬಿಂದುವು ಕಂಬನಿದುಂಬಿದ ನೇತ್ರಗಳಿಂದ ತಾಯಿಯ ಮುಖದ ಕಡೆಗೆ ನೋಡುತ್ತ ಸುಮ್ಮನೆ ಕುಳಿತಿದ್ದಳು.

ಸಾಯಂಕಾಲದ ನಂತರ ಬಿಂದುವು ಕಮಲೆಯನ್ನು ಕರೆದು "ಕಮಲಾ, ಆ ದಿನ ನೀನೇ ಎದುರಿಗಿದ್ದೆ, ಅಲ್ಲವೇ? ಅವರು ಅಷ್ಟು ದೊಡ್ಡ ಪ್ರತಿಜ್ಞೆಯನ್ನು ಮಾಡುವಂತಹ ಭಯಂಕರ ಅಪರಾಧವನ್ನಾದರೂ ನಾನು ಮಾಡಿದುದೇನು? ನೀನೇ ಹೇಳು!" ಎಂದಳು.

ಆದರೆ ಕಮಲೆಯು ಬಿಂದುವು ತನ್ನನ್ನು ಈ ವಿಚಾರವಾಗಿ ಮಾತ ನಾಡಲು ಕರೆಸುವಳೆಂದು ಕನಸಿನಲ್ಲಿಯೂ ಊಹಿಸಿರಲಿಲ್ಲ; ಅವಳಿಗೆ ಅತ್ಯಂತ ಸಂಕೋಚವಾಯಿತು. ಏನೂ ಉತ್ತರ ಕೊಡದೆ ಮೌನದಿಂದ ಕುಳಿತಿದ್ದಳು. ಆದರೂ ಪುನಃ ಬಿಂದುವು "ಇಲ್ಲ, ಇಲ್ಲ; ಎಷ್ಟೇ ಆಗಲಿ, ನೀನು ವಯಸ್ಸಿನಲ್ಲಿ ನನಗಿಂತ ದೊಡ್ಡವಳು. ನಿಮ್ಮಂತಹವರ ಒಂದೆರಡು ಮಾತುಗಳನ್ನು ನಾನು ಕೇಳಲೇಬೇಕು. ನೀನೇ ಹೇಳು, ನನ್ನಿಂದ ಏನಾದರೂ ತಪ್ಪಾಯಿತೇ?" ಎಂದಳು.

ಕಮಲೆಯು ತಲೆಯಲ್ಲಾಡಿಸಿ "ಇಲ್ಲ, ಇಲ್ಲ; ಇದರಲ್ಲಿ ದೋಷದ ಮಾತಾವುದು?" ಎಂದಳು.

ಬಿಂದುವು "ಹಾಗಿದ್ದರೆ ಕೇಳು! ಆ ಮನೆಗೆ ಹೋಗಿ ಅವರಿಗೆ ಚೆನ್ನಾಗಿ ಬುದ್ಧಿ ಬರುವಂತೆ ಒಂದೆರಡು ಮಾತುಗಳನ್ನು ಹೇಳಿ ಬಾ; ನಿನಗೇತರ ಭಯ?" ಎಂದಳು.

ಕಮಲೆಯು ಧೈರ್ಯ ತಂದುಕೊಂಡು "ಯಾತರ ಭಯವೂ ಇಲ್ಲ ಅಕ್ಕನವರೇ! ಆದರೆ ಈಗ ಜಗಳ ಮಾಡುವ ಆವಶ್ಯಕತೆಯಾದರೂ ಏನು? ಆದದ್ದಾಯಿತು!" ಎಂದಳು

ಬಿಂದುವು "ಇಲ್ಲ, ಇಲ್ಲ ಕಮಲಾ! ನಿನಗೆ ಗೊತ್ತಿಲ್ಲ,—ನಿಜವಾದ ಮಾತನ್ನು ಹೇಳಿಬಿಡುವೆನು. ಇಲ್ಲದಿದ್ದರೆ ಅವರು ದೋಷವೆಲ್ಲ ನನ್ನದೆಂದೂ ತಮ್ಮದಾವ ದೋಷವು ಇಲ್ಲವೆಂದೂ ತಿಳಿಯುವರು. ಹೊರ

ದೂಡುವೆನು, ಹೊರಗಟ್ಟುವೆನು ಎಂಬಿವೇ ಮಾತುಗಳನ್ನು ಅವರು ಹೇಳಲಿಲ್ಲವೇ? ಇವೆಲ್ಲ ಮಾತುಗಳಿಗೂ ನಾನು ಎಂದಾದರೂ ಕೋಪಮಾಡಿ ಕೊಂಡೆನೇ? ಅವರು ನನಗೆ ಕಾಣದಂತೆ ರೂಪಾಯಿಗಳನ್ನೇಕೆ ಕೊಟ್ಟರು? ನನಗೇಕೆ ತಿಳಿಸಲಿಲ್ಲ?" ಎಂದಳು.

ಕಮಲೆಯು "ಹಾಗೆಯೇ ಆಗಲಿ, ನಾಳೆ ಹೋಗುವೆನು. ಈಗ ಸಂಜೆ ಯಾಯಿತು" ಎಂದಳು.

ಬಿಂದುವು ಅಪ್ರಸನ್ನಳಾಗಿ "ಸಂಜೆ ಎಲ್ಲಾಯಿತು ಕಮಲಾ? ನೀನು ಮಾತನ್ನು ಬಹಳ ಮರೆಸುವೆ. ಮಳೆಯ ದಿನಗಳಾದುದರಿಂದ ಆ ರೀತಿ ಕಾಣಿಸುವುದು. ಇಲ್ಲದಿದ್ದರೆ ಯಾರನ್ನಾದರೂ ಸಂಗಡ ಕರೆದುಕೊಂಡು ಹೋಗು—ಏ, ಭೈರ! ಸ್ವಲ್ಪ ಜವಾನನನ್ನು ಕರೆ, ಕಮಲೆಯ ಸಂಗಡ ಹೋಗಲಿ" ಎಂದಳು.

ಭೈರನು "ಬಾಬೂಜೀಯವರು ಜವಾನನ ಕೈಯಿಂದ ಲಾಂದ್ರವನ್ನು ಒರೆಸಿಸುತ್ತಿರುವರು" ಎಂದ.

ಬಿಂದುವು ಅವನನ್ನು ದುರದುರನೆ ದಿಟ್ಟಿಸಿ "ಪುನಃ ನಿಂತ ಸ್ಥಳದಿಂದಲೇ ಉತ್ತರ ಕೊಡುತ್ತಿರುವೆಯಾ?" ಎಂದಳು.

ಭೈರನು ಭಯದಿಂದ ಒಂದು ನಿಮಿಷವೂ ಅಲ್ಲಿ ನಿಲ್ಲದೆ ಮರೆಯಾದ. ಕಮಲೆಯನ್ನು ಕಳುಹಿಸಿದ ನಂತರ ಬಿಂದುವು ಒಂದೆರಡು ಬಾರಿ ಅಲ್ಲಿಂದ ಇಲ್ಲಿ, ಇಲ್ಲಿಂದ ಅಲ್ಲಿ ತಿರುಗಾಡಿ ಕಡೆಗೆ ಅಡಿಗೆಯ ಮನೆಯನ್ನು ಪ್ರವೇಶಿ ಸಿದಳು. ಅಡಿಗೆಯವಳು ಒಬ್ಬಳೇ ಕುಳಿತು ಅಡಿಗೆ ಮಾಡುತ್ತಿದ್ದಳು. ಬಿಂದುವು ಒಂದುಕಡೆಗೆ ಕುಳಿತು "ಮಿಸರಾನೀ, ನಿನ್ನ ಸಾಕ್ಷ್ಯವನ್ನು ಕೇಳುವೆನು. ನಿಜವಾದುದನ್ನು ಹೇಳು, ತಪ್ಪು ಯಾರದು?" ಎಂದು ಕೇಳಿದಳು.

ಅಡಿಗೆಯವಳಿಗೆ ಅರ್ಥವಾಗಲಿಲ್ಲ. ಅವಳು "ಎಂತಹ ತಪ್ಪು, ಯಾರ ತಪ್ಪು?" ಎಂದಳು.

ಬಿಂದುವು "ಆ ದಿನದ ಮಾತು! ನಾನು ಹೇಳಿದುದಾದರೂ ಏನು? ಈ ಮಧ್ಯೆ ಅಮೂಲ್ಯನಿಗೆ ನೀವೇನಾದರೂ ರೂಪಾಯಿಗಳನ್ನು ಕೊಟ್ಟಿರಾ?" ಎಂದು ಕೇಳಿದೆ. ಮಕ್ಕಳ ಕೈಲಿ ದುಡ್ಡು-ಕಾಸುಗಳನ್ನು ಕೊಡಬಾರದೆಂದು ಯಾರಿಗೆ ತಾನೇ ತಿಳಿಯದು? 'ಬಹಳ ಹಟಮಾಡಿ ಅಳುತ್ತ ಕುಳಿತ, ಆದುದ ರಿಂದ ಕೊಟ್ಟೆ' ಎಂದಿದ್ದರೆ ಮಾತು ಮುಗಿಯುತ್ತಿತ್ತು. ಜಗಳವು ಅಲ್ಲಿಗೇ ನಿಲ್ಲುತ್ತಿತ್ತು. ಈ ಒಂದು ಮಾತಿಗಾಗಿ ಇಷ್ಟೆಲ್ಲ ಜಗಳವಾದರೂ ಏಕೆ? ಮನೆಯಲ್ಲಿ ಇರುವವನು ಒಬ್ಬ ಹುಡುಗ—ಅದರಲ್ಲೂ ಅವನ ಮೇಲೆ ಆಣೆ ಇಟ್ಟು ಪ್ರತಿಜ್ಞೆಯೇ! ಮಿಸರಾನೀ, ಇನ್ನು ಈ ಜನ್ಮದಲ್ಲಿ ನಾನು ಅವರ ಮುಖವನ್ನು ನೋಡಲಾರೆ. ಶತ್ರುವನ್ನಾದರೂ ಕಣ್ಣೆತ್ತಿ ನೋಡುವೆನು, ಅವರನ್ನು ನೋಡಲಾರೆ!" ಎಂದಳು.

ಅಡಿಗೆಯವಳು ಸ್ವಭಾವದಲ್ಲೇ ಮಿತಭಾಷಿಣಿ. ಏನು ಹೇಳಬೇ ಕೆಂಬುದು ಅವಳಿಗೆ ತೋರಲಿಲ್ಲ, ಸುಮ್ಮನಿದ್ದಳು. ಬಿಂದುವಿನ ನೇತ್ರಗಳು ಅಶ್ರುಪೂರಿತವಾದುವು. ಒಡನೆಯೆ ಅವಳು ಕಣ್ಣುಗಳನ್ನು ಒರೆಸಿಕೊಂಡು ಗದ್ಗದ ಸ್ವರದಿಂದ "ಕೋಪ ಬಂದಾಗ ಯಾರು ತಾನೇ ಪ್ರತಿಜ್ಞೆ ಮಾಡುವು ದಿಲ್ಲ ಮಿಸರಾನೀ? ಆದರೆ ಇಷ್ಟಕ್ಕಾಗಿ ಒಂದು ತೊಟ್ಟು ನೀರು ಸಹ ಕುಡಿಯಬಾರದೇ? ಮಗನನ್ನು ಸಹ ಬರಗೊಡಲಿಲ್ಲ! ಇವೆಲ್ಲಾ ದೊಡ್ಡವ ರಿಗೆ ಯೋಗ್ಯವಾದ ಕೆಲಸಗಳೇ? ಎಷ್ಟೇ ಆಗಲಿ, ನಾನು ಚಿಕ್ಕವಳು, ಬುದ್ಧಿ ಕಡಿಮೆ—ಒಂದುವೇಳೆ ಅವರ ಹೊಟ್ಟೆಯಲ್ಲಿ ಹುಟ್ಟಿದ ಮಗಳೇ ಆಗಿದ್ದರೆ ಆಗೇನು ಮಾಡುತ್ತಿದ್ದರು? ಇನ್ನುಮುಂದೆ ಅವರ ಹೆಸರನ್ನು ಸಹ ಉಚ್ಚರಿ ಸುವುದಿಲ್ಲವೆಂದು ನಾನು ಪ್ರತಿಜ್ಞೆ ಮಾಡುವೆನು!" ಎಂದಳು.

ಅಡಿಗೆಯವಳು ಪುನಃ ಸುಮ್ಮನಿದ್ದಳು. ಬಿಂದುವು "ಪ್ರತಿಜ್ಞೆ ಮಾಡುವುದು, ಆಣೆ-ಭಾಷೆಗಳನ್ನಿಡುವುದು ಅವರಿಗೆ ಮಾತ್ರ ಬರುತ್ತದೆ; ನನಗೆ ಬರುವುದಿಲ್ಲವೇ? ನಾನು ನಾಳೆಯ ದಿನ ಆ ಮನೆಗೆ ಹೋಗಿ 'ಬಟ್ಟಲು ತುಂಬ ವಿಷವನ್ನು ಕಳುಹಿಸಿಕೊಡದಿದ್ದರೆ ನಿಮ್ಮಾಣೆ!' ಎಂದು ಹೇಳಿ ಬಂದರೆ ಏನಾಗುವುದು ಬಲ್ಲೆಯಾ? ಆದರೆ ಈಗ ಸುಮ್ಮನಿರುವೆನು. ಒಂದೆರಡು ದಿನಗಳನಂತರ ಹೋಗಿ ಇದೇ ರೀತಿ ಆಣೆ ಇಟ್ಟುಕೊಂಡು ಬರು

ವೆನು, ಅಥವಾ ನಾನೇ ವಿಷವನ್ನು ಕುಡಿದು ಅಕ್ಕನವರು ಕಳುಹಿಸಿದರೆಂದು ಹೇಳಿಬಿಡುವೆನು. ಆಗ ನಾಲ್ಕು ಜನರು ಅವರನ್ನು ಉಗಿಯುವರೋ ಇಲ್ಲವೋ ನೋಡುವೆನು! ಆಗಲಾದರೂ ಅವರಿಗೆ ಬುದ್ಧಿ ಬರುವುದೋ ಇಲ್ಲವೋ ನೋಡುವೆನು!" ಎಂದಳು.

ಅಡಿಗೆಯವಳು ಹೆದರುತ್ತ ಹೆದರುತ್ತ ಮೃದುಸ್ವರದಿಂದ "ಛೀ, ಛೀ; ಇಂತಹ ಮಾತುಗಳನ್ನು ಯೋಚಿಸಬಾರದು, ಜಗಳ ಕದನಗಳು ಯಾವಾಗಲೂ ಇರುವುದಿಲ್ಲ. ಅವರೂ ನಿಮ್ಮನ್ನು ಬಿಟ್ಟು ಇರಲಾರರು. ಅಮೂಲ್ಯನೂ ನಿಮ್ಮನ್ನು ಬಿಟ್ಟು ಇರಲಾರ. ಈಗ ಕೆಲವು ದಿನಗಳಿಂದ ಅವನು ಅಲ್ಲಿ ಹೇಗಿರುವನೆಂಬುದೇ ನಮಗೆಲ್ಲಾ ಬಹಳ ಆಶ್ಚರ್ಯವಾಗಿದೆ" ಎಂದಳು.

ಬಿಂದುವು ಆತುರದಿಂದ "ನಾನೂ ಸಹ ಅದನ್ನೇ ಹೇಳುವುದು ಮಿಸರಾನೀ! ಅವರು ಅವನನ್ನು ಹೊಡೆದು-ಬೈದು, ಗದರಿಸಿರಬೇಕು. ಒಂದುದಿನ ಸಹ ನನ್ನನ್ನು ಬಿಟ್ಟು ಇರುತ್ತಿರಲಿಲ್ಲ. ಅಂತಹವನು ಈಗ ಐದು ದಿನಗಳಿಂದ ಈ ಕಡೆಗೆ ಸಹ ತಿರುಗಲಿಲ್ಲ. ಇದೆಲ್ಲವೂ ಅವಳ ಕೆಲಸ. ಇಂತಹ ಹೆಂಗುಸಿನ ಮುಖವನ್ನು ಪುನಃ ನೋಡಬಹುದೇ? ನಾನು ಆಗಲೇ ಹೇಳಿದೆನಲ್ಲ, ಶತ್ರುವನ್ನಾದರೂ ಕಣ್ಣೆತ್ತಿ ನೋಡುವೆನು—ಆದರೆ ಅವರನ್ನು ಈ ಜನ್ಮವಿರುವವರೆಗೆ ಕಣ್ಣೆತ್ತಿ ನೋಡಲಾರೆ" ಎಂದಳು.

ಅಡಿಗೆಯವಳು ತನ್ನ ಮೊಣಕೈಯ ಬಳಿ ಇದ್ದ ಒಂದು ಗುರುತನ್ನು ತೋರಿಸುತ್ತ "ಇಲ್ಲಿ ನೋಡಿರಿ, ಆ ದಿನದ ಮಾತು. ಆ ದಿನ ರಾತ್ರಿ ನೀವು ಪ್ರಜ್ಞೆ ತಪ್ಪಿ ಬಿದ್ದಾಗ ನಡೆದ ವಿಷಯ. ನಿಮಗೆ ತಿಳಿಯದು. ಅಮೂಲ್ಯ ಎಲ್ಲಿಂದಲೋ ಓಡಿಬಂದು ನಿಮ್ಮ ಎದೆಯ ಮೇಲೆ ತಲೆಯಿಟ್ಟು ಬಹಳವಾಗಿ ಅಳತೊಡಗಿದ, — ಆ ದಿನ ಅವನ ರೋದನವನ್ನು ನೀವು ಕೇಳಿದ್ದರೆ! ಸಾಯುವುದೆಂದರೆ ಏನೆಂಬುದನ್ನು ಅರಿಯದ ಆ ಬಾಲಕನು 'ಚಿಕ್ಕಮ್ಮ ಸತ್ತುಹೋದಳು!' ಎಂದು ಗೋಳಾಡತೊಡಗಿದ. ನನಗೆ ನೀರು ಚಿಮುಕಿಸಗೊಡಲಿಲ್ಲ, ಗಾಳಿ ಹಾಕಗೊಡಲಿಲ್ಲ,—ನಾನು ಅವನನ್ನು ಹಿಡಿದೆತ್ತಲು ಹೋದೆ, ಅವನು ನನ್ನ ಮೊಣಕೈ ಬಳಿ ಗಟ್ಟಿಯಾಗಿ ಕಚ್ಚಿಬಿಟ್ಟ. ದೊಡ್ಡ ಅಕ್ಕನವರು ಎತ್ತಲು ಹೋದರು, ಅವರನ್ನೂ ಹೊಡೆದು ಒದೆದು ಕಚ್ಚಿ,

ಸೀರೆಯ ಸೆರಗನ್ನು ಹರಿದುಹಾಕಿದ. ಇಂತಹ ಪರಿಸ್ಥಿತಿಯಲ್ಲಿ ನಿಮ್ಮ ಸೇವೆಯನ್ನು ಮಾಡುವುದು ಹಾಗಿರಲಿ! ಅವನನ್ನು ತಡೆಯುವುದೇ ಕಷ್ಟವಾಯಿತು. ಕಡೆಗೆ ನಾಲ್ಕಾರು ಜನರು ಸೇರಿ ಅವನನ್ನು ಹೊರಗೆ ಕರೆದುಕೊಂಡು ಹೋದರು" ಎಂದಳು.

ಬಿಂದುವು ಎವೆಯಿಕ್ಕದೆ ಅಡಿಗೆಯವಳ ಮುಖವನ್ನೇ ನೋಡುತ್ತ, ಅವಳ ಮಾತುಗಳನ್ನು ಕೇಳುತ್ತಿದ್ದಳು ನಂತರ ಒಮ್ಮೆ ನಿಟ್ಟುಸಿರೆಳೆದು, ತನ್ನ ಕೊಠಡಿಗೆ ಹೋಗಿ ಬಾಗಿಲು ಮುಚ್ಚಿ ನೆಲದ ಮೇಲೆ ಬಿದ್ದುಕೊಂಡಳು.

ನಾಲ್ಕಾರು ದಿನಗಳ ನಂತರ ಬಿಂದುವಿನ ತಾಯಿ ತಂದೆ, ಅತ್ತೆ ಮೊದಲಾದವರು ಊರಿಗೆ ಹೋಗುವ ಮೊದಲನೆಯ ದಿನ ಬಿಂದುವು ಮೂರ್ಛಿತಳಾಗಿದ್ದಳು. ಪ್ರಜ್ಞೆ ಬಂದನಂತರ ಹಾಸಿಗೆಯ ಮೇಲೆ ಮಲಗಿದ್ದಳು. ಕಮಲೆಯು ಪಕ್ಕದಲ್ಲಿ ಕುಳಿತು ಗಾಳಿ ಬೀಸುತ್ತಿದ್ದಳು. ಮತ್ತಾರೂ ಅಲ್ಲಿರಲಿಲ್ಲ. ಬಿಂದುವು ಕಮಲೆಯನ್ನು ಕೈಸನ್ನೆಯಿಂದ ಮತ್ತಿಷ್ಟು ಸಮೀಪಕ್ಕೆ ಕರೆದು ಮೃದುಸ್ವರದಿಂದ "ಕಮಲಾ, ಅಕ್ಕನವರು ಬಂದಿರುವರೇ ?" ಎಂದು ಕೇಳಿದಳು.

ಕಮಲೆಯು "ಇಲ್ಲ. ನಾವಿಷ್ಟು ಜನರಿರುವಾಗ ಅವರಿಗೇಕೆ ತೊಂದರೆ ಕೊಡಬೇಕು ?" ಎಂದಳು.

ಬಿಂದುವು ಸ್ವಲ್ಪಹೊತ್ತು ಸುಮ್ಮನಿದ್ದು "ನಿಮ್ಮಲ್ಲಿರುವ ದೋಷವೇ ಇದು! ಯಾವ ಕೆಲಸದಲ್ಲೂ ನಿಮ್ಮ ಬುದ್ಧಿಯನ್ನು ತೋರಿಸಬಯಸುವಿರಿ. ಹೇಗೆಯೋ ಒಂದಿಲ್ಲ ಒಂದುದಿನ ನನ್ನ ಪ್ರಾಣವನ್ನೂ ತೆಗೆದುಬಿಡುವಿರೆಂದು ತೋರುವುದು! ಪೂಜೆಯ ದಿನವೂ ಸಹ ನೀವೆಲ್ಲರೂ ಇದ್ದಿರಿ, ಆದರೆ ಆ ಒಬ್ಬ ವ್ಯಕ್ತಿಯು ಬಂದ ಹೊರತು ನಿಮ್ಮಿಂದ ಆದ ಕೆಲಸವಾದರೂ ಏನು? ನೀವೆಲ್ಲಿ! ಅವರೆಲ್ಲಿ! ನಿಮ್ಮೆಲ್ಲರನ್ನೂ ಸೇರಿಸಿದರೂ ಅವರ ಕಾಲ ಹೆಬ್ಬೆರಳನ್ನು ಸರಿದೂಗಲಾರಿರಿ!" ಎಂದಳು.

ಅಷ್ಟರಲ್ಲಿ ಬಿಂದುವಿನ ತಾಯಿಯು ಕೊಠಡಿಯನ್ನು ಪ್ರವೇಶಿಸಿ "ಬಿಂದೂ, ಕೆಲದಿನಗಳ ಮಟ್ಟಿಗೆ ನೀನೂ ಸಹ ನಮ್ಮೊಡನೆ ಬರಬೇಕೆಂದು ನಿನ್ನ ಪತಿಯ ಇಚ್ಛೆ ಇರುವಂತಿದೆ ಬಾ!" ಎಂದಳು.

ಬಿಂದುವು ತಾಯಿಯ ಮುಖವನ್ನು ದಿಟ್ಟಿಸುತ್ತ "ನಾನು ಹೋಗುವುದು ಅಥವಾ ಬಿಡುವುದು ಅವರ ಇಷ್ಟವನ್ನು ಅವಲಂಬಿಸಿರುವುದೇ ಅಮ್ಮಾ! ಅವರು ಹೋಗೆಂದು ಹೇಳಿದರೆ ನಾನು ಬರಲಿಕ್ಕಾಗುವುದೇ? ನನ್ನ ಶತ್ರುವಿನ ಅಪ್ಪಣೆಯನ್ನು ಪಡೆದ ಹೊರತು ಹೇಗೆ ಬರಲಿಕ್ಕಾಗುವುದು?" ಎಂದಳು.

ಮಾತೆಯು ಈ ಮಾತಿನ ಅರ್ಥವನ್ನು ಅರಿತು "ನಿನ್ನ ಓರಗಿತ್ತಿಯ ಮಾತನ್ನು ಹೇಳುವೆಯಾ? ಅವಳ ಅನುಮತಿಯ ಆವಶ್ಯಕತೆ ಏನು? ನೀವು ಬೇರೆ ಹೊರಟುಬಂದಿರುವುದರಿಂದ ಕೇವಲ ಅಳಿಯನವರ ಮಾತೇ ಸಾಕು!" ಎಂದಳು.

ಬಿಂದುವು ತಲೆಯಲ್ಲಾಡಿಸಿ "ಇಲ್ಲ, ಇಲ್ಲ; ಹಾಗಾಗಲಾರದು. ಜೀವದಿಂದ ಇರುವವರೆಗೂ ಅವರಲ್ಲೇ ಇರಲಿ, ಸರ್ವಸ್ವವೂ ಅವರೇ! ಏನು ಮಾಡಿದರೂ ಅವರ ಅನುಮತಿಯಿಲ್ಲದೆ ಮನೆಬಿಟ್ಟು ಹೊರಡಲಾರೆ ಅಮ್ಮಾ! ಹಾಗೆ ಮಾಡಿದಲ್ಲಿ ಭಾವನವರು ಕೋಪಗೊಳ್ಳುವರು" ಎಂದಳು.

ಆ ಸಮಯಕ್ಕೆ ಸರಿಯಾಗಿ ಎಲೊಕೇಶಿಯು ಬಂದು "ನಾನು ಹೇಳುವೆನು, ಹೋಗಿಬಾ!" ಎಂದಳು.

ಬಿಂದುವು ಅವಳ ಮಾತಿಗೆ ಯಾವ ಉತ್ತರವನ್ನೂ ಕೊಡಲಿಲ್ಲ. ಅವಳ ತಾಯಿಯು "ಸರಿಯೆ! ಹಾಗಿದ್ದಲ್ಲಿ ಯಾರನ್ನಾದರೂ ಕಳುಹಿಸಿ ಅವರ ಅನುಮತಿಯನ್ನು ಪಡೆದುಕೋ" ಎಂದಳು.

ಬಿಂದುವು ಚಕಿತಳಾಗಿ "ಯಾರನ್ನಾದರೂ ಕಳುಹಿಸಿ? ಇದರಿಂದ ಮತ್ತಿಷ್ಟು ಕೋಪಕ್ಕೆ ಕಾರಣವಾಗುವುದು, ಅಮ್ಮಾ! ನನಗೆ ಅವರ ಮನಸ್ಸು ಗೊತ್ತು. 'ಹೋಗಲಿ,' ಎಂದು ಮೇಲಿನಿಂದ ಹೇಳಿಬಿಡುವರು; ಆದರೆ ಮನಸ್ಸಿನಲ್ಲೇ ಕೋಪಗೊಳ್ಳುವರು. ಅಲ್ಲದೆ ನಾಲ್ಕಾರು ಸುಳ್ಳು-ಪೊಳ್ಳುಗಳನ್ನು ಕೂಡಿಸಿ ಭಾವನವರಿಗೆ ಹೇಳುವರು,—ಇಲ್ಲ ಅಮ್ಮಾ, ನೀವು ಹೋಗಿರಿ, ನಾನು ಬರಲಾರೆ!" ಎಂದಳು.

ಮಾತೆಯು ಮುಂದೆ ಅವಳನ್ನು ಬಲಾತ್ಕರಿಸಲಿಲ್ಲ, ಅಲ್ಲಿಂದ ಹೊರಟು ಹೋದಳು. ಮರುದಿನವೇ ಎಲ್ಲರೂ ಅವರವರ ಊರಿಗೆ ಹೊರಟುಹೋದರು.

ಈಗ ಶೂನ್ಯಗೃಹದಲ್ಲಿನ ಒಂದೊಂದು ಕ್ಷಣವೂ ಬಿಂದುವಾಸಿನಿಗೆ ಒಂದೊಂದು ಯುಗದಂತೆ ಭಾಸವಾಯಿತು. ಕೆಳಗಿನ ಒಂದು ಕೊಠಡಿಯಲ್ಲಿ ಏಲೊಕೇಶಿ ಇರುವಳು, ಮೇಲುಗಡೆ ಒಂದು ಕೊಠಡಿಯಲ್ಲಿ ತಾನಿರುವಳು. ಉಳಿದ ಎಲ್ಲ ರೂಮುಗಳೂ 'ಬಿಕೋ' ಎನ್ನತೊಡಗಿದುವು. ಶೂನ್ಯ ಮನಸ್ಸಿನಿಂದ ಅಲ್ಲಿಂದ ಇಲ್ಲಿ, ಇಲ್ಲಿಂದ ಅಲ್ಲಿ ತಿರುಗಾಡುತ್ತ ಕೊನೆಗೆ ಬಿಂದುವು ಮೂರನೆಯ ಅಂತಸ್ತಿನಲ್ಲಿದ್ದ ಒಂದು ಭವ್ಯವಾದ ಕೊಠಡಿಯನ್ನು ಪ್ರವೇಶಿಸಿದಳು. ಸುದೂರ ಭವಿಷ್ಯದ ಪುತ್ರವಧುವಿನ ಹೆಸರಿನಿಂದ ಈ ಕೊಠಡಿಯನ್ನು ಕಟ್ಟಿಸಿದ್ದಳು. ಒಳಗೆಹೋಗುತ್ತಲೇ ಆಕೆಯ ಹೃದಯವು ಉಕ್ಕೇರಿಬಂತು. ಧಡಧಡನೆ ಕಣ್ಣೀರು ಸುರಿಯಲಾರಂಭಿಸಿತು ಕಣ್ಣುಗಳನ್ನು ಒರೆಸಿಕೊಂಡು ಅವಳು ಕೆಳಗಿಳಿಯುತ್ತಿದ್ದಳು. ಇಳಿಯುತ್ತಿರುವಾಗ ಪತಿಯ ಭೇಟಿಯಾಯಿತು ಅವಳು "ಏನು, ಈಗೇನು ಮಾಡುವುದು?" ಎಂದಳು.

ಮಾಧವನಿಗೇನೂ ಅರ್ಥವಾಗಲಿಲ್ಲ. ಅವನು "ಯಾವ ವಿಚಾರವನ್ನು ಹೇಳುತ್ತಿರುವೆ?" ಎಂದ.

ಏನು ಉತ್ತರ ಕೊಡಬೇಕೆಂಬುದು ಬಿಂದುವಿಗೆ ತೋರಲಿಲ್ಲ. ಒನ್ನ್ಕೆ ನಿಟ್ಟುಸಿರೆಳೆದು ಅವಳು "ಇಲ್ಲ, ಇಲ್ಲ, ನೀವು ಹೋಗಿರಿ; ಏನೂ ಇಲ್ಲ!" ಎಂದು ಹೊರಟುಹೋದಳು.

ಮರುದಿನ ಬೆಳಿಗ್ಗೆ ಮಾಧವ ಹೊರಗಡೆಯ ಕೊಠಡಿಯಲ್ಲಿ ಕುಳಿತು ತನ್ನ ಕೆಲಸದಲ್ಲಿ ಮಗ್ನನಾಗಿದ್ದ. ಬಿಂದುವು ಅಕಸ್ಮಾತ್ ಅಲ್ಲಿಗೆ ಬಂದಳು. ಬಂದವಳು ಒಡನೆಯೇ ಆಶ್ಚರ್ಯದಿಂದ "ಭಾವನವರು ನೌಕರಿ ಮಾಡುತ್ತಿರುವರೇ?" ಎಂದು ಕೇಳಿದಳು.

ತಲೆಯೆತ್ತದೆಯೇ "ಹೌದು" ಎಂದ ಮಾಧವ.

"ಹೌದೇನು? ನೌಕರಿ ಮಾಡಿ ಸಂಪಾದಿಸುವ ವಯಸ್ಸೇ ಅವರದು?"

ಮೊದಲಿನಂತೆಯೇ ಕಾಗದಗಳಿಂದ ದೃಷ್ಟಿಯನ್ನು ಕದಲಿಸದೆ "ಮನುಷ್ಯನು ನೌಕರಿಯನ್ನ ವಯಸ್ಸಿಗಾಗಿ ಮಾಡುವನೇ? ನೌಕರಿಮಾಡುವುದು ಅಭಾವಕ್ಕಾಗಿ!" ಎಂದ ಮಾಧವ.

"ಅವರಿಗಾವ ಅಭಾವ? ನಾವು ಅವರಿಗೆ ಪರಕೀಯರೇ? ನಮ್ಮಿಬ್ಬರ್ರಲ್ಲಿ ಜಗಳವಾದರೇನು? ನೀವು ಅವರ ತಮ್ಮನಲ್ಲವೇ?"

"ಸ್ವಂತ ಸಹೋದರನಲ್ಲ ಬಿಂದೂ! ಮಲತಾಯಿಯ ಮಗ!" ಎಂದ ಮಾಧವ.

ಬಿಂದುವು ಆಶ್ಚರ್ಯಚಕಿತಳಾದಳು. ನಂತರ ಅವಳು ಮೃದುಸ್ವರದಿಂದ "ನೀವು ಜೀವಂತರಾಗಿದ್ದುಕೊಂಡು ಅವರನ್ನು ನೌಕರಿ ಮಾಡಗೊಡುವಿರಾ?" ಎಂದಳು.

ಮಾಧವ ಒಂದುಸಲ ತಲೆಯೆತ್ತಿ ಬಿಂದುವಿನ ಕಡೆಗೆ ನೋಡಿದ; ನಂತರ ಸ್ವಾಭಾವಿಕ ಶಾಂತ ಸ್ವರದಿಂದ "ಏಕೆ ಮಾಡಗೊಡಬಾರದು? ಪ್ರಪಂಚದಲ್ಲಿ ಎಲ್ಲರೂ ಅವರವರ ಅದೃಷ್ಟಕ್ಕನುಸಾರವಾಗಿ ಸುಖ-ದುಃಖಗಳನ್ನು ಅನುಭವಿಸುವರು. ನಾನೇ ಇದಕ್ಕೆ ಪ್ರತ್ಯಕ್ಷ ದೃಷ್ಟಾಂತ. ಮಾತಾ-ಪಿತೃಗಳು ಯಾವಾಗ ಜೀವತೊರಿದರೆಂಬುದನ್ನು ನಾನರಿಯೆ! ನಾವು ಬಹಳ ದರಿದ್ರಾವಸ್ಥೆಯಲ್ಲಿ ಇದ್ದೆವೆಂದು ಒಮ್ಮೊಮ್ಮೆ ಅತ್ತಿಗೆಯು ಹೇಳುತ್ತಿದ್ದಳು. ಆದರೆ ದುಃಖ-ಕಷ್ಟನೆಂಬುದರ ಅರಿವು ಸಹ ನನಗಾಗಲಿಲ್ಲ. ಸ್ಕೂಲು-ಕಾಲೇಜುಗಳಲ್ಲಿನ ಖರ್ಚು, ಪುಸ್ತಕಗಳ ಖರ್ಚು, ಬಟ್ಟೆ-ಬರೆಗಳ ಖರ್ಚು, ಇವೆಲ್ಲವೂ ಎಲ್ಲಿಂದ ದೊರೆತುವೆಂಬುದು ಇದುವರೆಗೂ ನನಗೆ ಗೊತ್ತಿಲ್ಲ. ಬಳಿಕ ವಕೀಲನಾಗಿ ಬಹಳವಾಗಿ ದುಡ್ಡನ್ನು ಗಳಿಸಿದೆ. ಆ ಸಮಯಕ್ಕೆ ಸರಿಯಾಗಿ ಎಲ್ಲಿಂದಲೋ ನೀನೂ ರಾಶಿರಾಶಿಯಾಗಿ ಹಣವನ್ನು ಸಂಗಡ ತಂದೆ!—ಭವ್ಯ-ಭವನವನ್ನೂ ಕಟ್ಟಿಸಲಾಯಿತು—ಆದರೆ ಅಣ್ಣನವರನ್ನು ನೋಡು, ಯಾವಾಗಲೂ ಮೂಳೆ ಮುರಿಯುವಂತೆ ಕಷ್ಟಪಟ್ಟು ಕೆಲಸ ಮಾಡುತ್ತ ಬಂದರು. ಹರಕು-ಹಳೆಯದನ್ನೇ ಧರಿಸಿ ಕಾಲಕಳೆಯುತ್ತ ಬಂದರು—ಚಳಿಗಾಲದಲ್ಲೂ ಸಹ ಅವರ ಮೈಮೇಲೆ ಬೆಚ್ಚನೆಯ ಬಟ್ಟೆಯನ್ನು ನೋಡಿದ ದಿನವಿಲ್ಲ—ಕೇವಲ ಒಂದು ಹಿಡಿ ಅನ್ನವನ್ನು ತಿಂದು ಜೀವಿಸಿ ಎಲ್ಲವನ್ನೂ ನಮಗಾಗಿ ತೆತ್ತರು—ಇವೆಲ್ಲವೂ ನನಗೆ ಚೆನ್ನಾಗಿ ನೆನಪಿಲ್ಲ, ಅಲ್ಲದೆ ಅವನ್ನು ನೆನೆಸುವುದಕ್ಕೂ ನನಗೆ ಇಷ್ಟವಿಲ್ಲ—ಸ್ವಲ್ಪ ದಿನಗಳ ವರೆಗೆ ವಿರಾಮವನ್ನು ಕಂಡರೋ ಇಲ್ಲವೋ ಎನ್ನುವಷ್ಟರಲ್ಲೇ ಪರಮಾ

ತ್ಮನು ಅದನ್ನು ಬಡ್ಡಿ ಸಹಿತವಾಗಿ ವಸೂಲು ಮಾಡುತ್ತಿರುವನು!" ಎಂದು ಹೇಳಿ ಮಾಧವ ಮುಖವನ್ನು ಅತ್ತ ತಿರುಗಿಸಿ ಯಾವುದೋ ಕಾಗದವನ್ನು ಹುಡುಕ ತೊಡಗಿದ.

ಬಿಂದುವು ಸ್ತಬ್ಧಳಾದಳು. ಕಳೆದ ದಿನಗಳ ಈ ಇತಿಹಾಸದ ಹಿಂದೆ ಪತಿಯ ಎಷ್ಟು ತಿರಸ್ಕಾರವು ಅಡಗಿತ್ತೆಂಬುದನ್ನು ಅವಳು ಅರಿತಳು. ಆಕೆಯ ರೋಮ-ರೋಮಕ್ಕೂ ಈ ಮಾತಿನ ಅನುಭವವಾಯಿತು. ಅವಳು ತಲೆ ತಗ್ಗಿಸಿ ಸುಮ್ಮನೆ ನಿಂತಳು.

ಮಾಧವ ಕಾಗದ ಹುಡುಕುತ್ತಿರುವಂತೆಯೇ ತನ್ನಷ್ಟಕ್ಕೆ ತಾನು "ಅದರಲ್ಲೂ ಎಂತಹ ನೌಕರಿ? ರಾಧಾಪುರದ ಕಚೇರಿಗೆ ಹೋಗಿ ಬರುವುದೆಂದರೆ ಸುಮ್ಮನಾಯಿತೇ? ಹದಿನೈದು ಮೈಲುಗಳ ನಡಿಗೆ!—ಮುಂಜಾನೆ ನಾಲ್ಕು ಗಂಟೆಗೆ ಹೋಗಿ ದಿನವೆಲ್ಲಾ ಊಟ-ತಿಂಡಿ ಸಹ ಇಲ್ಲದೆ ಕೆಲಸಮಾಡಿ ರಾತ್ರಿಗೆ ಮನೆಗೆ ಹಿಂತಿರುಗುವುದು! ಹನ್ನೆರಡು ರೂಪಾಯಿ ಸಂಬಳ!" ಎಂದ.

ಈ ಮಾತನ್ನು ಕೇಳಿ ಬಿಂದುವಿನ ಮೈ ಕಂಪಿಸಿತು. ಅವಳು ಆಶ್ಚರ್ಯ ಹಾಗೂ ದುಃಖದಿಂದ "ಊಟ-ತಿಂಡಿ ಸಹ ಇಲ್ಲದೆ ದಿನವೆಲ್ಲಾ ಕೆಲಸ! ಕೇವಲ ಹನ್ನೆರಡು ರೂಪಾಯಿ ಸಂಬಳ!" ಎಂದಳು.

"ಹೌದು, ಹನ್ನೆರಡು ರೂಪಾಯಿ! ವಯಸ್ಸಾದವರು. ಅಫೀಮಿನ ಅಭ್ಯಾಸ ಬೇರೆ ಉಳ್ಳವರು; ಸ್ವಲ್ಪ ಹಾಲು ಸಹ ದೊರೆಯುವುದಿಲ್ಲ. ಇಷ್ಟು ದಿನಗಳ ನಂತರ ಆ ಪರಮಾತ್ಮನು ಕೃಪೆಮಾಡಿ ಅಣ್ಣನವರನ್ನು ಸಂಸಾರ ಬಂಧನದಿಂದ ಪಾರಾಗಿಸುವ ಉಪಾಯವನ್ನು ಹುಡುಕಿರುವಂತೆ ತೋರುವುದು."

ಬಿಂದುವಿನ ನೇತ್ರಗಳು ಅಶ್ರುಪೂರಿತವಾದುವು. ಎಂದೂ ಮಾಡದ ಕೆಲಸವನ್ನು ಅವಳು ಇಂದು ಮಾಡಿದಳು. ಮೊಣಕಾಲೂರಿ ಪತಿಯ ಕಾಲುಗಳಿಗೆ ನಮಸ್ಕರಿಸಿ ಕಣ್ಣೀರು ಸುರಿಸುತ್ತ ಅವಳು "ನಿಮ್ಮ ಕಾಲಿಗೆರಗುವೆನು, ಏನಾದರೂ ಉಪಾಯ ಮಾಡಿರಿ—ಅವರು ಬಹಳ ಬಲಹೀನರು. ಈ ರೀತಿ ಒಂದೆರಡು ದಿನ ಸಹ ಬದುಕಲಾರರು" ಎಂದಳು.

ಮಾಧವನು ಹರಿಯುತ್ತಿದ್ದ ಕಣ್ಣೀರನ್ನು ಒರೆಸಿಕೊಳ್ಳುತ್ತ "ನಾನೇನು ಉಪಾಯಮಾಡಲಿ?—ಅತ್ತಿಗೆಯು ನಮ್ಮಿಂದ ಒಂದು ಅಗುಳು ಅನ್ನ ಸಹ ತೆಗೆದುಕೊಳ್ಳುವುದಿಲ್ಲ;—ಹೀಗಿರುವಲ್ಲಿ ಅಣ್ಣನವರು ಕೆಲಸ ಬಿಟ್ಟರೆ, ಅವರ ಸಂಸಾರ ನಡೆಯುವ ರೀತಿಯಾದರೂ ಹೇಗೆ?" ಎಂದ.

ಬಿಂದುವು ಗದ್ಗದ ಸ್ವರದಿಂದ "ಅದನ್ನು ನಾನರಿಯೆ. ನೀವು ನನ್ನ ದೇವರು, ಅವರು ನಿಮಗಿಂತ ಹೆಚ್ಚಾದವರು. ಹೀಗಿರುವಲ್ಲಿ ಅವರನ್ನು ಛೀ, ಛೀ; ಈ ಮಾತನ್ನು ಯೋಚಿಸುವುದೂ ಸಹ ಸರಿಯಲ್ಲ,—" ಎಂದಳು. ಬಿಂದುವಿಗೆ ಮುಂದೆ ಮಾತನಾಡಲಾಗಲಿಲ್ಲ.

ಮಾಧವನು "ಸರಿಯೆ! ಹಾಗಿದ್ದರೆ ಅತ್ತಿಗೆಯವರ ಬಳಿಗಾದರೂ ಹೋಗು. ಅವರ ಕೋಪವು ಇಳಿದು ಅವರು ಪ್ರಸನ್ನರಾಗುವಂತೆ ಮಾಡು. ದಿನವೆಲ್ಲಾ ನನ್ನ ಕಾಲು ಹಿಡಿದು ಅಳುತ್ತ ಕುಳಿತರೆ ಏನೂ ಪ್ರಯೋಜನ ವಿಲ್ಲ" ಎಂದ.

ಬಿಂದುವು ಒಡನೆಯೇ ಅವನ ಕಾಲುಗಳನ್ನು ಬಿಟ್ಟು ಎದ್ದು ಕುಳಿತಳು. ನಂತರ ಅವಳು "ಕಾಲು ಹಿಡಿಯುವುದು ನನ್ನ ಸ್ವಭಾವವೇ ಅಲ್ಲ. ಓಹೋ, ಈಗ ತಿಳಿಯಿತು! ಆ ದಿನ ಅವರು ಒಂದು ತೊಟ್ಟು ನೀರು ಸಹ ಕುಡಿಯಲಿಲ್ಲ, ನೀವು ತಿಳಿದೂ-ತಿಳಿದೂ ಸುಮ್ಮನಿದ್ದಿರಿ. ನಾನು ಒಂದೆರಡು ಮಾತನಾಡಿದೆ, ಅದೇ ದೊಡ್ಡ ಅಪರಾಧವಾಯಿತು? ನೀವು ಮಾತು ಸಹ ಆಡದೆ ಹೊರಟುಹೋದಿರಿ!" ಎಂದಳು.

ಮಾಧವನು ಕಾಗದದ ಮೇಲೆ ಧ್ಯಾನವನ್ನಿರಿಸಿ "ಇಲ್ಲ. ಈ ವಿದ್ಯೆಯನ್ನು ನಾನು ಅಣ್ಣನವರಿಂದ ಕಲಿತೆನು. ಹೀಗೆಯೇ ಸುಮ್ಮನಿದ್ದು ಒಂದು ದಿನ ಇಲ್ಲಿಂದ ಪಾರಾಗುವಂತೆ ಭಗವಂತನು ಅನುಗ್ರಹಿಸಲಿ!" ಎಂದ.

ಬಿಂದುವು ಮುಂದೆ ಮಾತನಾಡಲಿಲ್ಲ. ಎದ್ದು ತನ್ನ ಕೊಠಡಿಗೆ ಹೋದಳು. ಬಾಗಿಲನ್ನು ಮುಚ್ಚಿ ನೆಲದ ಮೇಲೆ ಅಳುತ್ತ ಬಿದ್ದುಕೊಂಡಳು.

ಮಾಧವ ಎದ್ದು ಹೊರಡಲು ಸಿದ್ಧನಾಗಿದ್ದ, ಅಷ್ಟರಲ್ಲಿ ಬಿಂದುವು ಪುನಃ ಅಲ್ಲಿಗೆ ಬಂದಳು. ಅವಳ ಎರಡೂ ಕಣ್ಣುಗಳು ಅತ್ತು ಅತ್ತು ಕೆಂಪಾಗಿ

ಊದಿ ಹೋಗಿದ್ದುವು. ಮಾಧವನಿಗೆ ದಯೆ ಬಂತು. "ಹೋಗು, ಒಂದಾವರ್ತಿ ಅವರ ಬಳಿಗೆ ಹೋಗು. ಅವರ ಸ್ವಭಾವವನ್ನು ಅರಿಯೆಯಾ? ಒಮ್ಮೆ ಅವರೆದುರಿಗೆ ಹೋಗಿ ನಿಲ್ಲು, ಎಲ್ಲವೂ ಸರಿಹೋಗುವುದು" ಎಂದ.

ಬಿಂದುವು ಅತ್ಯಂತ ದೀನ ಸ್ವರದಿಂದ "ನೀವೇ ಹೋಗಿರಿ! ನನ್ನ ಮಗ (ಅಮೂಲ್ಯ) ನಾಣೆಗೂ ನಾನು –" ಎಂದಳು.

ಮಾಧವ ಅವಳ ಮನಸ್ಸಿನ ಭಾವವನ್ನರಿತ. ತುಸು ಕೋಪದಿಂದ ಅವನು "ನೀನು ಸಾವಿರ ಆಣೆಗಳನ್ನಿಟ್ಟರೂ ಸರಿಯೆ, ನಾನು ಅಣ್ಣನವರಿಗೆ ಹೋಗಿ ಹೇಳಲಾರೆ. ಅವರು ಕೇಳುವುದಕ್ಕೆ ಮುಂಚಿತವಾಗಿ ನಾನು ಹೋಗಿ ಹೇಳಲಾರೆ. ನನ್ನನ್ನು ಕತ್ತರಿಸಿದರೂ ನನಗಷ್ಟು ಸಾಹಸವಾಗಲಾರದು" ಎಂದ.

ಇಷ್ಟಾದರೂ ಬಿಂದುವಾಸಿನಿಯು ಸ್ಥಳ ಬಿಟ್ಟು ಕದಲಲಿಲ್ಲ.

"ಹೋಗುವುದಿಲ್ಲವೇ ?" ಎಂದ ಮಾಧವ.

"ಇಲ್ಲ" ಎಂದು ಉತ್ತರವಿತ್ತು ಬಿಂದುವು ಮೆಲ್ಲನೆ ಅಲ್ಲಿಂದ ಹೊರಟುಹೋದಳು.

೮

ಮನೆಯ ಮುಂದುಗಡೆಯೇ ಶಾಲೆಗೆ ಹೋಗುವ ಹಾದಿ. ಮೊದಮೊದಲು ಕೆಲವು ದಿನಗಳವರೆಗೆ ಅಮೂಲ್ಯ ಕೊಡೆಯನ್ನು ಮರೆಯಾಗಿ ಹಿಡಿದುಕೊಂಡು ಅದೇ ರಸ್ತೆಯಲ್ಲಿ ಹೋಗುತ್ತಿದ್ದ. ಆದರೆ ಈಗ ಎರಡು ದಿನಗಳಿಂದ ಅವನ ಕೆಂಪು ಬಣ್ಣದ ಕೊಡೆಯು ಆ ರಸ್ತೆಯಲ್ಲಿ ಕಾಣುವುದಿಲ್ಲ. ಅವನ ದಾರಿ ಕಾದು ಕಾದು ಬಿಂದುವಿನ ಕಣ್ಣುಗಳು ಬೇಸತ್ತುವು. ಅಷ್ಟಾದರೂ ಅವಳು ಮಹಡಿಯ ಮೇಲೆ ಅಂಗಳದಲ್ಲಿ ಮರೆಯಾಗಿ ಕುಳಿತು ಎವೆಯಿಕ್ಕದೆ ರಸ್ತೆಯ ಕಡೆಗೆ ನೋಡುತ್ತಿದ್ದಳು! ಬೆಳಿಗ್ಗೆ ಒಂಬತ್ತರಿಂದ ಹತ್ತು ಗಂಟೆಯವರೆಗೆ ಎಷ್ಟೋ ತರದ ಕೊಡೆಗಳನ್ನು ಹಿಡಿದು ಎಷ್ಟೋ ಹುಡುಗರು ಆ ರಸ್ತೆಯಲ್ಲಿ ಹೋಗುವರು. ಸಾಯಂಕಾಲ ಸ್ಕೂಲು ಮುಗಿದ ನಂತರ ಎಷ್ಟೋ ಮಂದಿ ಹಿಂತಿರುಗುವರು; ಆದರೆ ಆ ನಡಿಗೆ, ಆ ಕೊಡೆ— ಬಿಂದುವಿನ ಕಣ್ಣಿಗೆ ಬೀಳಲಿಲ್ಲ. ಸಾಯಂಕಾಲ ಅವಳು ಕಣ್ಣೊರೆಸಿ

ಕೊಳ್ಳುತ್ತ ಕೆಳಗಿಳಿದು ಬಂದಳು. ನರೇಂದ್ರನನ್ನು ಕರೆದು ''ನರೇಂದ್ರ! ಶಾಲೆಗೆ ಹೋಗುವ ಸರಿಯಾದ ರಸ್ತೆ ಇದೇ ಅಲ್ಲವೇ? ಆದರೂ ಅವನು ಈ ರಸ್ತೆಯಿಂದ ಏಕೆ ಹೋಗುವುದಿಲ್ಲ?'' ಎಂದು ಕೇಳಿದಳು.

ನರೇಂದ್ರ ಸುಮ್ಮನಿದ್ದ.

ಬಿಂದುವು ''ಅಣ್ಣ-ತಮ್ಮಂದಿರಿಬ್ಬರೂ ತಮಾಷೆಯಾಗಿ ಮಾತುಕತೆಗಳನ್ನಾಡುತ್ತಾ ಜೊತೆಯಾಗಿ ಒಂದೇ ರಸ್ತೆಯಲ್ಲಿ ಹೋಗುವುದು ಒಳ್ಳೆಯದು ನರೇಂದ್ರ!" ಎಂದಳು.

ನರೇಂದ್ರ ನಿಜವಾಗಿಯೂ ಅಮೂಲ್ಯನನ್ನು ಪ್ರೀತಿಸುತ್ತಿದ್ದ. ಅವನು "ನಾಚಿಕೆಯಿಂದ ಅವನು ಈ ರಸ್ತೆಯಲ್ಲಿ ಹೋಗುವುದಿಲ್ಲ ಚಿಕ್ಕಮ್ಮಾ! ಈಗೆರಡು ದಿನಗಳಿಂದ ಅದೋ ನೋಡು! ಆ ರಸ್ತೆಯಲ್ಲಿ ಹೋಗುವನು" ಎಂದ.

ಬಿಂದುವು ನಗಲಾರದೆ ನಗುತ್ತ "ನಾಚಿಕೆ ಏತಕ್ಕೆ? ಇಲ್ಲ, ಇಲ್ಲಿಂದಲೇ ಹೋಗುವಂತೆ ನೀನು ಅವನಿಗೆ ಹೇಳು" ಎಂದಳು.

ನರೇಂದ್ರ ತಲೆಯಲ್ಲಾಡಿಸಿ ''ಇಲ್ಲ ಚಿಕ್ಕಮ್ಮಾ! ಅವನು ಇನ್ನು ಮುಂದೆ ಈ ರಸ್ತೆಯಿಂದ ಖಂಡಿತವಾಗಿಯೂ ಹೋಗುವುದಿಲ್ಲ! ಏತಕ್ಕೆ ಹೋಗುವುದಿಲ್ಲ ಗೊತ್ತೇ!" ಎಂದ.

ಬಿಂದುವು ಉತ್ಸುಕತೆಯಿಂದ ''ಏಕೆ?" ಎಂದಳು.

''ಕೋಪ ಮಾಡಿಕೊಳ್ಳುವುದಿಲ್ಲವಷ್ಟೇ?" ಎಂದ ನರೇಂದ್ರ.

''ಇಲ್ಲ.''

''ಅವನ ಮನೆಯವರ ಪೈಕಿ ಯಾರಿಗೂ ಹೇಳುವುದಿಲ್ಲ ತಾನೇ?"

''ಇಲ್ಲ.''

''ನನ್ನ ಅಮ್ಮನಿಗೂ ಹೇಳಕೂಡದು!"

ಬಿಂದುವು ಅಧೀರಳಾಗಿ ''ಇಲ್ಲ, ಹೇಳುವುದಿಲ್ಲ ನರೇಂದ್ರ! ನೀನು ಹೇಳು. ನಾನು ಖಂಡಿತವಾಯೂ ಯಾರಿಗೂ ಹೇಳುವುದಿಲ್ಲ!" ಎಂದಳು.

ನರೇಂದ್ರ ಪಿಸಪಿಸನೆ "ಮೂರನೆಯ ಮಾಸ್ಟರು ಚೆನ್ನಾಗಿ ಅವನ ಕಿವಿ ಹಿಂಡಿಬಿಟ್ಟರು!" ಎಂದ.

ಕ್ಷಣಕಾಲ ಬಿಂದುವು ಸ್ತಬ್ಧಳಾಗಿದ್ದು ಕೋಪದಿಂದ "ಏಕೆ ಕಿವಿ ಹಿಂಡಿದರು? ಶರೀರವನ್ನು ಮುಟ್ಟಕೂಡದೆಂದು ನಾನು ಅವರಿಗೆ ಹೇಳಿದ್ದೆನಲ್ಲಾ" ಎಂದಳು.

ನರೇಂದ್ರ ಕೈಯಲ್ಲಾಡಿಸುತ್ತ "ಅವರದೇನೂ ದೋಷವಿಲ್ಲ ಚಿಕ್ಕಮ್ಮಾ! ಅವರಿನ್ನೂ ಹೊಸಬರು. ನಮ್ಮ ಆಳುಮಗನು ಅದೆಷ್ಟು ಕೆಟ್ಟವನು ಗೊತ್ತೇ! ಅವನು ಅಮ್ಮನೊಡನೆ ಏನೇನೋ ಹೇಳಿದ. ಅಮ್ಮ ಮಾಸ್ಟರಿಗೆ ಹೇಳಿಬಿಡೆಂದು ಹೇಳಿದಳು. ಅವನು ಹೋಗಿ ಹೇಳಿದ. ಒಡನೆಯೇ ಮಾಸ್ಟರು ಚೆನ್ನಾಗಿ ಕಿವಿಹಿಡಿದು ಹಿಂಡಿಬಿಟ್ಟರು,—ಹೇಗೆ ಗೊತ್ತೇ, ಚಿಕ್ಕಮ್ಮಾ! ಇಲ್ಲಿ ನೋಡು, ಹೀಗೆ ಹಿಡಿದು—" ಎಂದ.

ಬಿಂದುವು ಅವನನ್ನು ತಡೆದು "ಆಳುಮಗನು ಏನನ್ನು ಹೇಳಿದ?" ಎಂದು ಕೇಳಿದಳು.

"ನನಗೇನು ಗೊತ್ತು ಚಿಕ್ಕಮ್ಮಾ! ಆಳುಮಗನು ಪ್ರತಿ ದಿನವೂ ಮಧ್ಯಾಹ್ನ ಟಿಫನ್ (Tiffin) ಹೊತ್ತಿಗೆ ಸರಿಯಾಗಿ ನನಗೆ ತಿಂಡಿ ತರುವನು. ಆಗ ಅವನು ಓಡಿ ಬಂದು 'ಏನು ತಿಂಡಿ ತಂದಿರುವನು ನೋಡೋಣ ನರೇಂದ್ರ!' ಎನ್ನುವನು. ಇದನ್ನು ಕೇಳಿ ಅಮ್ಮನು ಅಮೂಲ್ಯ ಕಣ್ಣು ಬಿಡುವನೆಂದು ಹೇಳಿದಳು."

"ಅಮೂಲ್ಯನಿಗೆ ಯಾರೂ ತಿಂಡಿಯನ್ನು ತಂದುಕೊಡುವುದಿಲ್ಲವೇ?"

ನರೇಂದ್ರ ತಲೆಯ ಮೇಲೆ ಕೈಯಿಟ್ಟು "ಅವನಿಗಾರು ತಂದುಕೊಡಬೇಕು ಚಿಕ್ಕಮ್ಮಾ! ಅವರು ಬಹಳ ಬಡವರು. ಜೇಬಿನಲ್ಲಿ ಸ್ವಲ್ಪ ಹುರಿದ ಕಡಲೆಯನ್ನು ತೆಗೆದುಕೊಂಡು ಬರುವನು. ಟಿಫನ್ ಹೊತ್ತಿನಲ್ಲಿ ಮರದಡಿ ಕುಳಿತು ಯಾರಿಗೂ ಕಾಣದಂತೆ ಅದನ್ನು ತಿನ್ನುವನು" ಎಂದ.

ಬಿಂದುವಿನ ತಲೆಯಲ್ಲಿ ಯೋಚನಾತರಂಗವೆದ್ದಿತು. ಅವಳು ತಲೆಯ

ಮೇಲೆ ಕೈಯಿಟ್ಟು ನಿಂತಲ್ಲೇ ಕುಳಿತುಬಿಟ್ಟಳು. "ನರೇಂದ್ರ, ನೀನು ಹೋಗು!" ಎಂದಳು ಬಿಂದುವಾಸಿನಿ.

ಆ ದಿನ ರಾತ್ರಿ ಬಹಳವಾಗಿ ಕರೆದ ಬಳಿಕ ಬಿಂದುವು ಊಟಕ್ಕೆ ಬಂದಳು. ಆದರೆ ಯಾವ ರೀತಿಯಿಂದಲೂ ತುತ್ತು ಒಳ ಹೋಗುತ್ತಿರಲಿಲ್ಲ. ಕಡೆಗೆ ಅವಳು 'ದೇಹಸ್ಥಿತಿ ಸರಿಯಾಗಿಲ್ಲ' ಎಂದು ಹೇಳಿ ಊಟಬಿಟ್ಟು ಎದ್ದಳು. ಮರುದಿನವೂ ಅವಳು ಊಟವನ್ನೇ ಮಾಡಲಿಲ್ಲ; ಆದರೆ ಯಾರೊಡನೆಯೂ ಏನನ್ನೂ ಹೇಳಲಿಲ್ಲ,—ಎಷ್ಟು ಹುಡುಕಿದರೂ ಅವಳಿಗೆ ಯಾವ ಉಪಾಯವೂ ತೋರಲಿಲ್ಲ. ಏನಾದರೂ ಹೇಳುವುದರಿಂದ ತನ್ನ ತಪ್ಪು ಮತ್ತಿಷ್ಟು ಹೆಚ್ಚಾಗಬಹುದೆಂದ ಭೀತಿಯೇ ಅವಳನ್ನು ಬಾಧಿಸುತ್ತಿತ್ತು. ಸಾಯಂಕಾಲ ಪತಿಯ ಊಟದ ಸಮಯದಲ್ಲಿ ಅವಳು ನಿತ್ಯದಂತೆ ಒಳಗೆ ಹೋಗಿ ಕುಳಿತಳು. ಆದರೆ ಅವಳ ದೃಷ್ಟಿಯು ಮಾತ್ರ ಎತ್ತಲೋ ಇತ್ತು. ಅವಳಿಗೆ ತಿಂಡಿ ಪದಾರ್ಥಗಳನ್ನು ಕಣ್ಣೆತ್ತಿ ನೋಡುವ ಇಚ್ಛೆ ಸಹ ಆಗಲಿಲ್ಲ.

ರಾತ್ರಿ ದೀಪವು ಉರಿಯುತ್ತಿತ್ತು. ಮಾಧವ ಹಾಗೆಯೇ ಹಾಸಿಗೆಯ ಮೇಲೊರಗಿ ಅರ್ಧ ನಿಮೀಲಿತ ನೇತ್ರಗಳಿಂದ ಏನನ್ನೋ ಓದುತ್ತಿದ್ದ. ಬಿಂದುವು ಬಳಿಗೆ ಬಂದು ಕುಳಿತಳು. ಮಾಧವ ತಲೆಯೆತ್ತಿ ನೋಡಿ "ಏನು?" ಎಂದ.

ಬಿಂದುವು ತಲೆ ತಗ್ಗಿಸಿ ಪತಿಯ ಒಂದು ಕಾಲು ಬೆರಳಿನ ಉಗುರನ್ನು ಮೆಲ್ಲನೆ ಗೀರತೊಡಗಿದಳು.

ಮಾಧವ ಅವಳ ಮನಸ್ಸಿನ ಮಾತನ್ನು ಊಹಿಸಿ, ಮನದಲ್ಲೇ ದುಃಖ ಗೊಂಡ. ಸ್ವಲ್ಪ ಹೊತ್ತು ಸುಮ್ಮನಿದ್ದು ಅವನು "ನನಗೆಲ್ಲವೂ ಗೊತ್ತು ಬಿಂದೂ! ಆದರೆ ನನ್ನ ಬಳಿ ಅಳುವುದರಿಂದ ಪ್ರಯೋಜನವೇನು? ಅವರ ಹತ್ತಿರ ಹೋಗು!" ಎಂದ.

ಬಿಂದುವು ವಾಸ್ತವವಾಗಿಯೂ ಅಳುತ್ತಿದ್ದಳು. ಅವಳು ಮೃದುಸ್ವರ ದಿಂದ "ನೀವೇ ಹೋಗಿರಿ" ಎಂದಳು.

"ನಾನು ಹೋಗಿ ನಿನ್ನ ಮಾತನ್ನು ತಿಳಿಸಿದರೆ ಅಣ್ಣನವರು ಕೇಳುವುದಿಲ್ಲೇ?"

"ನನ್ನದೇ ತಪ್ಪಾಯಿತೆಂದು ಹೇಳುತ್ತಿರುವೆನಲ್ಲಾ ಮತ್ತೇನು? ನೀವು ಅವರೊಡನೆ ಹೋಗಿ ಹೇಳಿರಿ!''

''ನನ್ನಿಂದ ಆಗುವುದಿಲ್ಲ'' ಎಂದು ಹೇಳಿ ಮಾಧವ ಮತ್ತೊಂದು ಮಗ್ಗುಲಿಗೆ ತಿರುಗಿ ಮಲಗಿಕೊಂಡ.

ಬಿಂದುವು ಬಹಳ ಹೊತ್ತಿನವರೆಗೂ ಆಸೆಯಿಂದ ಕುಳಿತಿದ್ದಳು. ಆದರೆ ಮಾಧವ ಏನನ್ನೂ ಮಾತನಾಡಲಿಲ್ಲ. ಅವಳು ಮೆಲ್ಲನೆ ಅಲ್ಲಿಂದ ಎದ್ದು ಹೊರಟು ಹೋದಳು. ಪತಿಯ ಈ ಬಗೆಯ ವ್ಯವಹಾರದಿಂದ ಅವಳ ಹೃದಯವು ಕ್ಷಣಮಾತ್ರದಲ್ಲಿ ಕಠೋರ ಧಿಕ್ಕಾರದಿಂದ ತುಂಬಿಹೋಯಿತು. ಎಲ್ಲರೂ ತನ್ನನ್ನು ತ್ಯಾಗಮಾಡಿದರೆಂದು ಈ ದಿನ ಅವಳು ನಿಸ್ಸಂದೇಹವಾಗಿ ಅರಿತಳು

ಮರುದಿನ ಪ್ರಾತಃಕಾಲವೇ ಯಾದವನು ಬಿಂದುವಿಗೆ ತನ್ನ ತಾಯಿಯ ಮನೆಗೆ ಹೋಗಲು ಅನುಮತಿಯನ್ನಿತ್ತು ಒಂದು ಪತ್ರವನ್ನು ಬರೆದು ಕಳುಹಿಸಿದನು. ಅವಳ ತಂದೆಯವರಿಗೆ ಬಹಳ ಕಾಯಿಲೆಯಾಗಿದೆಯೆಂದೂ ಒಡನೆಯೇ ಹೊರಡಬೇಕೆಂದೂ ತಿಳಿಸಿದ್ದ. ಬಿಂದುವು ಅಶ್ರುಪೂರಿತ ನೇತ್ರಗಳಿಂದ ಗಾಡಿಯನ್ನೇರಿದಳು

ಅಡಿಗೆಯವಳು ಗಾಡಿಯ ಒಳಗೆ ಹೋಗಿ ''ತಂದೆಯವರನ್ನು ನೋಡಿಕೊಂಡು ಬೇಗನೆ ಹಿಂತಿರುಗಿರಿ" ಎಂದಳು.

ಬಿಂದುವು ಗಾಡಿಯಿಂದ ಇಳಿದು ಮಿಸರಾನಿಗೆ (ಅಡಿಗೆಯವಳಿಗೆ) ನಮಸ್ಕರಿಸಿದಳು. ಅಡಿಗೆಯವಳಿಗೆ ಅತ್ಯಂತ ಸಂಕೋಚವಾಯಿತು.

ಬಿಂದುವಿನ ಈ ರೀತಿಯ ವ್ಯವಹಾರ, ಇಷ್ಟು ನಮ್ರತೆಗಳನ್ನು ಇದುವರೆಗೆ ಯಾರೂ ಎಂದೂ ನೋಡಿರಲಿಲ್ಲ. ಅವಳು ಅಡಿಗೆಯವಳಿಗೆ ನಮಸ್ಕರಿಸುತ್ತ ''ಇಲ್ಲ, ಮಿಸ್‌ರಾನೀ! ಎಷ್ಟಾದರೂ ನೀನು ಬ್ರಾಹ್ಮಣರ ಮಗಳು. ವಯಸ್ಸಿನಲ್ಲಿ ನನಗಿಂತಲೂ ದೊಡ್ಡವಳು.—ಇನ್ನು ನಾನು ಹಿಂತಿರುಗದಿರಲೆಂದು ಆಶೀರ್ವಾದ ಮಾಡು. ಇದೇ ನನ್ನ ಕಟ್ಟಕಡೆಯ ಪ್ರಯಾಣವಾಗಲಿ!" ಎಂದಳು.

ಮಿಸರಾನಿಗೆ ಏನೂ ತೋರಲಿಲ್ಲ. ಅವಳು ಬಿಂದುವಿನ ಜೀರ್ಣ ಮತ್ತು ದುಃಖಪೂರ್ಣ ಮುಖವನ್ನು ನೋಡಿ ಕಣ್ಣೀರು ಸುರಿಸಿದಳು.

ಏಲೋಕೇಶಿಯೂ ಅಲ್ಲೇ ನಿಂತಿದ್ದಳು. "ಇದೆಂತಹ ಮಾತು ಬಿಂದೂ? ಪ್ರಪಂಚದಲ್ಲಿ ಯಾರ ತಂದೆ-ತಾಯಿಗಳಿಗೂ ಕಾಯಿಲೆಯಾಗುವುದೇ ಇಲ್ಲವೇ?"

ಬಿಂದುವು ಏನೂ ಉತ್ತರ ಕೊಡಲಿಲ್ಲ. ಮುಖವನ್ನು ತಿರುಗಿಸಿ ಕಣ್ಣೊರೆಸಿಕೊಂಡಳು. ತುಸುಹೊತ್ತಾದ ಬಳಿಕ "ನಿಮಗೆ ನಮಸ್ಕರಿಸುವೆನು ಅಕ್ಕನವರೇ! ಇದೋ ಹೊರಟೆ" ಎಂದಳು.

ಏಲೋಕೇಶಿಯು "ಹೋಗಿಬಾ ತಂಗೀ! ಹೋಗಿಬಾ. ನಾನು ಮನೆಯಲ್ಲೇ ಇರುವೆನು, ಎಲ್ಲವನ್ನೂ ನೋಡಿಕೊಳ್ಳುವೆನು" ಎಂದಳು.

ಬಿಂದುವು ಪುನಃ ಏನೂ ಹೇಳಲಿಲ್ಲ. ಗಾಡಿಯವನು ಗಾಡಿಯನ್ನು ಮುಂದುವರಿಸಿದನು.

o o o o

ಅನ್ನಪೂರ್ಣೆಗೆ ಅಡಿಗೆಯವಳಿಂದ ಈ ಸಮಾಚಾರವೆಲ್ಲ ತಿಳಿದು ಬಂದಿತು. ಎಲ್ಲವನ್ನೂ ತಿಳಿದುಕೊಂಡು ಅವಳು ಸುಮ್ಮನಿದ್ದಳು.

ಈ ಮೊದಲು ಬಿಂದುವು ಅಮೂಲ್ಯನನ್ನು ಬಿಟ್ಟು ಎಂದೂ ತವರು ಮನೆಗೆ ಹೋದವಳಲ್ಲ. ಆದರೆ ಈ ಸಲ ಒಂದು ತಿಂಗಳಾದರೂ ಅವನನ್ನು ಒಮ್ಮೆ ನೋಡಲಾಗಲಿಲ್ಲ. ಅನ್ನಪೂರ್ಣೆಯು ಅವಳ ದುಃಖವನ್ನು ಅರಿತಳು.

ರಾತ್ರಿ ಅಮೂಲ್ಯನು ಯಾದವನ ಬಳಿ ಮಲಗಿಕೊಂಡು ಏನೇನೋ ಮಾತನಾಡುತ್ತಿದ್ದನು. ಕೆಳಗಡೆ ದೀಪದ ಪ್ರಕಾಶದಲ್ಲಿ ಕುಳಿತು ಅನ್ನಪೂರ್ಣೆಯು ಏನನ್ನೋ ಹೊಲಿಯುತ್ತಿದ್ದಳು. ಒಮ್ಮೆ ದೀರ್ಘವಾಗಿ ಉಸಿರೆಳೆದು ಅವಳು ಊರಿಗೆ ಹೋಗುವಾಗ 'ಇದೇ ಕಟ್ಟಕಡೆಯ ಪ್ರಯಾಣವಾಗಲಿ' ಎಂದು ಎಂತಹ ಮಾತನ್ನಾಡಿದಳು? ಆ ದುರ್ಗಾದೇವಿಯ ಕೃಪೆಯಿಂದ ಅವಳು ಸ್ವಸ್ಥಳಾಗಿ ಹಿಂತಿರುಗಲಿ!" ಎಂದಳು.

ಯಾದವ ಈ ಮಾತನ್ನು ಕೇಳಿ ಎದ್ದು ಕುಳಿತು "ಅನ್ನಪೂರ್ಣಾ!

ಮೊದಲಿನಿಂದ ಕೊನೆಯವರೆಗೂ ನೀನು ಮಾಡಿದ ಕೆಲಸಗಳು ಸರಿಯಾಹು ವಲ್ಲ! ನನ್ನ ಬಹೂರಾಣಿಯನ್ನು ನೀವಾರೂ ಅರಿತುಕೊಳ್ಳಲಿಲ್ಲ!'' ಎಂದ.

ಅನ್ನಪೂರ್ಣೆಯು ''ಅವಳಾದರೂ ಒಂದು ಸಲ 'ಅಕ್ಕಾ' ಎಂದು ಕೇಳಲು ಬರಲಿಲ್ಲ. ತನ್ನ ಮಗನನ್ನು ತಾನು ಯಾವ ಆತಂಕವೂ ಇಲ್ಲದೆ ಕರೆದುಕೊಂಡು ಹೋಗಬಹುದಾಗಿತ್ತು, ಅದನ್ನೂ ಮಾಡಲಿಲ್ಲ. ಆ ದಿನ ಅಷ್ಟೆಲ್ಲಾ ಕಷ್ಟಪಟ್ಟು ಕೆಲಸಮಾಡಿ ಹಿಂತಿರುಗುತ್ತಿದ್ದೆ,—ನಾಲ್ಕು ಒಳ್ಳೆಯ ಮಾತುಗಳನ್ನು ಹೇಳುವ ಬದಲು ಕಟುವಾಕ್ಯಗಳನ್ನೇ ಆಡಿದಳು!" ಎಂದಳು.

ಯಾದವನು ''ನನ್ನ ಬಹೂರಾಣಿಯ ವಿಷಯವನ್ನು ನಾನೊಬ್ಬನೇ ಬಲ್ಲೆ ಆದರೆ ಅನ್ನಪೂರ್ಣಾ! ಇಷ್ಟನ್ನೂ ಮನ್ನಿಸಲಾರದೆ ಹೋದರೆ ನೀನು ದೊಡ್ಡವಳೆಂದು ಎನಿಸಿಕೊಂಡೆಯಾದರೂ ಏಕೆ? ಮಾಧವನೂ ಸಹ ನಿನ್ನಂತೆಯೇ. ನೀವೆಲ್ಲರೂ ಸೇರಿ ಆವಳ ಪ್ರಾಣವನ್ನು ತೆಗೆದುಕೊಂಡಿರು ವಂತೆ ತೋರುವುದು!" ಎಂದ.

ಅನ್ನಪೂರ್ಣೆಯ ಕಣ್ಣುಗಳಿಂದ ಟಪಟಪನೆ ಕಂಬನಿಗಳುದುರಿದುವು.

ಅಮೂಲ್ಯನು ''ಬಾಬೂಜೀ, ಚಿಕ್ಕಮ್ಮ ಪುನಃ ಬರುವುದಿಲ್ಲವೆಂದು ಏಕೆ ಹೇಳಿದಳು?'' ಎಂದು ಕೇಳಿದ

ಅನ್ನಪೂರ್ಣೆಯು ಕಣ್ಣೊರೆಸಿಕೊಳ್ಳುತ್ತ ''ಹೋಗುವೆಯಾ ನಿಮ್ಮ ಚಿಕ್ಕಮ್ಮನ ಬಳಿ?" ಎಂದು ಅಮೂಲ್ಯನನ್ನು ಕೇಳಿದಳು.

ಅಮೂಲ್ಯ ತಡೆಯಲ್ಲಾಡಿಸಿ ''ಇಲ್ಲ!" ಎಂದ.

''ಏಕೆ ಹೋಗುವುದಿಲ್ಲ? ಚಿಕ್ಕಮ್ಮ ನಿಮ್ಮ ತಾತನವರ ಮನೆಗೆ ಹೋಗಿರುವಳು. ನೀನೂ ನಾಳೆ ಹೋಗು" ಎಂದಳು ಅನ್ನಪೂರ್ಣೆ.

ಅಮೂಲ್ಯನು ಮಾತನಾಡದೆ ಮೌನದಿಂದಿದ್ದನು

''ಹೋಗುವೆಯಾ ಅಮೂಲ್ಯ?" ಎಂದು ಕೇಳಿದ ಯಾದವ.

ಅಮೂಲ್ಯ ದಿಂಬಿನಿಂದ ಮುಖವನ್ನು ಮುಚ್ಚಿಕೊಂಡು, ಮುಂಚಿನಂತೆಯೇ ತಲೆಯಲ್ಲಾಡಿಸುತ್ತ ''ಇಲ್ಲ, ಹೋಗುವುದಿಲ್ಲ'' ಎಂದ.

ಬೆಳಗಾಗುವ ಮುಂಚೆಯೇ ಯಾದವ ನಿತ್ಯವೂ ಕೆಲಸಕ್ಕೆ ಹೊರಡಲು ಸಿದ್ಧನಾಗುತ್ತಿದ್ದ. ನಾಲ್ಕೈದು ದಿನದ ಮಾತು. ಒಂದುದಿನ ಅವನು ಇದೇ ರೀತಿ ಇನ್ನೂ ಕತ್ತಲುಕತ್ತಲಾಗಿರುವಾಗಲೇ ಹೊರಡಲು ಸಿದ್ಧನಾಗಿ ತಂಬಾಕನ್ನು ಸೇವಿಸುತ್ತಿದ್ದನು.

ಅನ್ನಪೂರ್ಣೆಯು "ಇನ್ನೂ ಕತ್ತಲಿದೆ" ಎಂದಳು.

ಯಾದವನು ಆತುರದಿಂದ ಹುಕ್ಕವನ್ನು ಕೆಳಗಿರಿಸಿ "ಈ ದಿನ ಏಕೋ ಮನಸ್ಸು ಸರಿಯಾಗಿಲ್ಲ ಅನ್ನಪೂರ್ಣಾ! ನಿನ್ನೆ ರಾತ್ರಿ ನನ್ನ ಬಹೂ ರಾಣಿಯು ಆ ಬಾಗಿಲ ಮರೆಯಲ್ಲಿ ಬಂದು ನಿಂತಿದ್ದಂತೆ ಕಂಡಿತು" ಎಂದ.

ಸ್ವಲ್ಪ ಹೊತ್ತಾದನಂತರ 'ದುರ್ಗಾ, ದುರ್ಗಾ' ಎನ್ನುತ್ತ ಅವನು ಕೆಲಸದ ಮೇಲೆ ಹೊರಟುಹೋದನು.

ಮುಂಜಾನೆ ಅನ್ನಪೂರ್ಣೆಯು ಕ್ಲಾಂತಭಾವದಿಂದ ಅಡಿಗೆಯ ಕೆಲಸವನ್ನು ಮಾಡುತ್ತಿದ್ದಳು. ಆ ಮನೆಯ ಆಳುಮಗನು ಬಂದು "ಬಾಬೂಜೀಯವರು ನಿನ್ನೆ ರಾತ್ರಿ ಫರಾಸಡಾಂಗಾಕ್ಕೆ ಹೋದರು. ಬಹೂಜೀಯವರ ದೇಹಸ್ಥಿತಿಯು ಬಹಳ ಕೆಟ್ಟಿರುವುದು" ಎಂದ.

ತನ್ನ ಪತಿಯ ಮಾತನ್ನು ನೆನೆದು ಅನ್ನಪೂರ್ಣೆಯ ಹೃದಯವು ಕಂಪಿಸಿತು. ಅವಳು "ಏನು ಕಾಯಿಲೆ?" ಎಂದಳು.

"ಅದೇನೊ ನನಗೆ ಗೊತ್ತಿಲ್ಲಮ್ಮ. ಆಗಾಗ್ಗೆ ಪ್ರಜ್ಞೆ ತಪ್ಪುವುದೆಂದೂ ಬಹಳ ಕಾಯಿಲೆಯೆಂದೂ ತಿಳಿದುಬಂತು" ಎಂದ ಆಳುಮಗ.

ಸಾಯಂಕಾಲ ಮನೆಗೆ ಬಂದ ಬಳಿಕ ಈ ಸಮಾಚಾರವನ್ನು ಕೇಳಿ ಯಾದವ ಕಣ್ಣೀರು ಸುರಿಸಿದ.—"ಎಷ್ಟು ಕಷ್ಟಪಟ್ಟು ಚಿನ್ನದ ಪ್ರತಿಮೆಯಂತಹ ಸೊಸೆಯನ್ನು ಮನೆಗೆ ತಂದಿದ್ದೆ. ಆದರೆ ಅನ್ನಪೂರ್ಣಾ, ನೀನು ಅದನ್ನು ಮಣ್ಣುಪಾಲಾಗಿಸಿದೆ!" ಎಂದ.

ತುಸುಹೊತ್ತಿನ ಬಳಿಕ ಪುನಃ "ನಾನು ಈಗಲೇ ಹೋಗುವೆನು!" ಎಂದ.

ದುಃಖ ಮತ್ತು ತಿರಸ್ಕಾರದಿಂದ ಅನ್ನಪೂರ್ಣೆಯು ಎದೆಯೊಡೆದು ಹೋಗುತ್ತಿತ್ತು. ಅವಳು ಅಮೂಲ್ಯನಿಗಿಂತಲೂ ಬಿಂದುವನ್ನು ಹೆಚ್ಚಾಗಿ ಪ್ರೀತಿಸುತ್ತಿದ್ದಳು. ತನ್ನ ಕಣ್ಣೀರೊರೆಸಿಕೊಂಡು ಪತಿಯ ಕೈಕಾಲುಗಳನ್ನು ತೊಳೆದು ಬಲಾತ್ಕಾರದಿಂದ ಅವನನ್ನು ಸಂಧ್ಯಾವಂದನೆಗೆ ಕುಳ್ಳಿರಿಸಿ, ಹೊರಗಡೆಗೆ ಅಂಗಳದಲ್ಲಿ ಹೋಗಿ ಕುಳಿತಳು. ಸ್ವಲ್ಪಹೊತ್ತಿನ ನಂತರವೇ ಮಾಧವನ ಧ್ವನಿ ಕೇಳಿಬಂದಿತು. ಅನ್ನಪೂರ್ಣೆಯು ಡಬಡಬನೆ ಬಡಿದುಕೊಳ್ಳುತ್ತಿದ್ದ ಎದೆಯನ್ನು ಅದುಮಿ, ಕಿವಿಗಳೆರಡನ್ನೂ ಮುಚ್ಚಿಕೊಂಡು ಕಲ್ಲು ಮನಸ್ಸುಮಾಡಿ ಕುಳಿತಿದ್ದಳು.

ಅಡಿಗೆಯ ಮನೆಯಲ್ಲಿ ಕತ್ತಲಾಗಿರುವುದನ್ನು ಕಂಡು ಮಾಧವನು ಪಕ್ಕದ ಕೊಠಡಿಯ ಬಳಿಗೆ ಬಂದನು. ಅಲ್ಲಿ ಅನ್ನಪೂರ್ಣೆಯು ಕತ್ತಲಲ್ಲಿ ಕುಳಿತಿರುವುದನ್ನು ಕಂಡು ಶುಷ್ಕ ಕಂಠದಿಂದ ಅವನು "ಅತ್ತಿಗೆ, ನಿಮಗೆ ಬಹುಶಃ ಸಮಾಚಾರವು ತಿಳಿದು ಬಂದಿರಬಹುದು" ಎಂದನು.

ಅನ್ನಪೂರ್ಣೆಯು ತಲೆಯೆತ್ತಲಿಲ್ಲ.

"ಒಂದು ಸಲ ಅಮೂಲ್ಯನು ಅತ್ಯಾವಶ್ಯಕವಾಗಿ ಹೋಗಬೇಕಾಗಿದೆ. ಸಾವು ಸಮೀಪಿಸಿರುವಂತೆ ತೋರುವುದು!" ಎಂದ ಮಾಧವ.

ಅನ್ನಪೂರ್ಣೆಯು ನೆಲದ ಮೇಲೆ ಬಿದ್ದು ಜೋರಾಗಿ ಅಳತೊಡಗಿದಳು. ಯಾದವ ರೂಮಿನಿಂದ ಗಾಬರಿಯಾಗಿ ಓಡಿಬಂದು "ಹಾಗಾಗುವುದಿಲ್ಲ, ಮಾಧವ! ನಾನು ಹೇಳುವೆನು ಕೇಳು. ಎಂದಿಗೂ ಹಾಗಾಗಲಾರದು. ನಾನು ತಿಳಿದೇ ಆಗಲಿ, ತಿಳಿಯದೆಯೇ ಆಗಲಿ, ಯಾರಿಗೂ ದುಃಖ ಕೊಟ್ಟಿಲ್ಲ. ಪರಮಾತ್ಮನು ಈ ವಯಸ್ಸಿನಲ್ಲಿ ನನಗೆ ಇಂತಹ ದಂಡವನ್ನು ವಿಧಿಸುವುದಿಲ್ಲ!" ಎಂದ.

ಮಾಧವನು ಮಾತನಾಡದೆ ಸುಮ್ಮನಿದ್ದ.

ಯಾದವನು "ಎಲ್ಲ ವಿಚಾರವನ್ನೂ ನನ್ನಲ್ಲಿ ಮರೆಮಾಚದೆ ತಿಳಿಸು. ನಾನು ಹೋಗಿ ಬಹೂರಾಣಿಯನ್ನು ಹಿಂದಕ್ಕೆ ಕರೆತರುವೆನು.— ನೀನು

ದುಃಖಪಡಬೇಡ, ವ್ಯಾಕುಲಪಡಬೇಡ ಮಾಧವ! ಸಂಗಡ ಗಾಡಿ ತಂದಿರುವೆಯಾ?" ಎಂದ.

ಮಾಧವ "ನಾನು ವ್ಯಾಕುಲಗೊಂಡಿಲ್ಲ ಅಣ್ಣಾ! ನೀವೇಕೆ ಈ ರೀತಿ ದುಃಖಪಡುತ್ತಿರುವಿರಿ?" ಎಂದ.

"ಏನೂ ಇಲ್ಲ ಮಾಧವ! ಏಳು ಅನ್ನಪೂರ್ಣಾ! ಬಾ ಅಮೂಲ್ಯ—!"

ಮಾಧವನು ಯಾದವನನ್ನು ತಡೆಯುತ್ತ "ರಾತ್ರಿ ಕಳೆಯಲಿ, ಬೆಳಿಗ್ಗೆ ಹೋದರಾಯಿತು ಅಣ್ಣಾ!" ಎಂದ.

"ಇಲ್ಲ, ಇಲ್ಲ; ಹಾಗಾಗುವುದಿಲ್ಲ.—ನೀನು ಗಾಬರಿಗೊಳ್ಳಬೇಡ ಮಾಧವ!—ಗಾಡಿಯನ್ನು ಕರೆ. ಇಲ್ಲದಿದ್ದರೆ ನಾನು ಕಾಲುನಡಿಗೆಯಿಂದಾದರೂ ಹೋಗುವೆನು!" ಎಂದ ಯಾದವ

ಮಾಧವ ಮರುಮಾತಾಡದೆ ಗಾಡಿಯನ್ನು ತರಲು ಹೋದ. ಗಾಡಿಯು ಬಂದ ನಂತರ ನಾಲ್ಕು ಜನರೂ ಕುಳಿತರು.

ಯಾದವನು "ನಂತರ ಏನಾಯಿತು?" ಎಂದನು.

"ನಾನು ಇರಲಿಲ್ಲ, ನನಗೆ ಸರಿಯಾಗಿ ಗೊತ್ತಿಲ್ಲ. ನಾಲ್ಕೈದು ದಿನ ಮುಂಚಿನಿಂದಲೂ ಬಹಳ ಜ್ವರವೆಂದೂ, ಆಗಾಗ್ಗೆ ಪ್ರಜ್ಞೆ ತಪ್ಪುತ್ತಿತ್ತೆಂದೂ ತಿಳಿದುಬಂದಿತು. ಅಂದಿನಿಂದ ಒಂದು ತೊಟ್ಟು ಔಷಧಿಯನ್ನಾಗಲಿ, ನೀರನ್ನಾಗಲಿ ಹಾಲನ್ನಾಗಲಿ ಕುಡಿಸಲು ಯಾರಿಗೂ ಸಾಧ್ಯವಾಗಲಿಲ್ಲವಂತೆ. ಏನಾಗಿದೆಯೆಂದು ಸರಿಯಾಗಿ ಹೇಳುವಂತಿಲ್ಲ. ಆದರೆ ಇನ್ನು ಆಶೆಯಿಲ್ಲ!" ಎಂದ ಮಾಧವ.

ಯಾದವನು ಧೈರ್ಯದಿಂದ "ಆಶೆಯಿದೆ. ಒಂದಲ್ಲ, ನೂರುಬಾರಿ ಆಶೆ ಇದೆ! ನನ್ನ ಬಹೂರಾಣಿಯು ಜೀವಂತಳಾಗಿರುವಳು. ಮಾಧವ, ಈ ವಯಸ್ಸಿನಲ್ಲಿ ಪರಮಾತ್ಮನು ನನ್ನ ಬಾಯಿಂದ ಸುಳ್ಳು ಮಾತನ್ನು ಹೊರಡಿಸುವುದಿಲ್ಲ.—ನಾನು ಎಂದೂ ಸುಳ್ಳು ಹೇಳಿದವನಲ್ಲ" ಎಂದನು.

ಮಾಧವನು ಅಣ್ಣನ ಕಾಲುಗಳಿಗೆ ನಮಸ್ಕರಿಸಿ ಸುಮ್ಮನೆ ಕುಳಿತನು.

೯

ಎಷ್ಟು ದಿನಗಳಿಂದ ಬಿಂದುವು ತಿನ್ನದೆ-ಉಣ್ಣದೆ ಕ್ಷಯಿಸುತ್ತಿರುವಳೆಂಬುದು ಯಾರಿಗೂ ತಿಳಿಯಲಿಲ್ಲ ತವರುಮನೆಗೆ ಹೋದ ಒಡನೆಯೇ ಅವಳಿಗೆ ಜ್ವರವೇರಿ ಬಂದಿತು. ಮರುದಿನ ಎರಡು-ಮೂರು ಬಾರಿ ಪ್ರಜ್ಞೆ ತಪ್ಪಿತು.—ಕೊನೆಯ ಬಾರಿ ಪ್ರಜ್ಞೆಯೇ ಬರಲಿಲ್ಲ. ಬಹಳ ಪ್ರಯತ್ನ ಮಾಡಿದ ನಂತರ—ಬಹಳ ಹೊತ್ತಾದ ಬಳಿಕ ಜ್ಞಾನ ಬಂದಿತು. ಆದರೂ ನಾಡಿಯ ಚಲನೆಯೇ ನಿಂತುಹೋದಂತಿತ್ತು. ಈ ಸಮಾಚಾರವನ್ನು ಕೇಳಿ ಮಾಧವನು ಬಂದನು. ಅವಳು ಪತಿಗೆ ನಮಸ್ಕರಿಸಿದಳು. ಆದರೆ ಬಾಯನ್ನು ಮುಚ್ಚಿಕೊಂಡು ಹಲ್ಲನ್ನು ಗಟ್ಟಿಯಾಗಿ ಕಚ್ಚಿಕೊಂಡಳು. ಬಹಳವಾದ ಅನುನಯ-ವಿನಯದಿಂದ ಹೇಳಿದರೂ ಸಹ ಅವಳು ಒಂದು ತೊಟ್ಟು ಹಾಲನ್ನೂ ಕುಡಿಯಲಿಲ್ಲ.

ಮಾಧವನು ಹತಾಶನಾಗಿ "ಈ ರೀತಿ ಆತ್ಮಘಾತವನ್ನೇಕೆ ಮಾಡಿಕೊಳ್ಳುತ್ತಿರುವೆ ಬಿಂದೂ?" ಎಂದ.

ಬಿಂದುವಿನ ಕಡೆಗಣ್ಣಿನಿಂದ ಕಂಬನಿಗಳು ತೊಟ್ಟಿಕ್ಕಿದುವು. ಸ್ವಲ್ಪ ಹೊತ್ತಿನ ನಂತರ ಅವಳು ಮೆಲ್ಲನೆ "ನನ್ನ ಸರ್ವಸ್ವವೂ ಅಮೂಲ್ಯನದು. ಕೇವಲ ಎರಡು ಸಾವಿರ ರೂಪಾಯಿಗಳನ್ನು ನರೇಂದ್ರನಿಗೆ ಕೊಡಿರಿ. ಅವನನ್ನು ಓದಿಸಿರಿ. ಅವನು ಅಮೂಲ್ಯನನ್ನು ಪ್ರೀತಿಸುವನು" ಎಂದಳು.

ಮಾಧವನು ಹಲ್ಲುಗಳಿಂದ ತುಟಿಯನ್ನು ಬಿಗಿಯಾಗಿ ಕಚ್ಚಿ ಉಕ್ಕಿ ಬರುತ್ತಿದ್ದ ಅಳುವನ್ನು ತಡೆದುಕೊಂಡಿದ್ದನು.

ಬಿಂದುವು ಕೈಸನ್ನೆಯಿಂದ ಅವನನ್ನು ಮತ್ತಿಷ್ಟು ಹತ್ತಿರ ಕರೆದು "ಅವನ ವಿನಾ ಮತ್ತಾರೂ ನನಗೆ ಬೆಂಕಿ ಹಾಕಕೂಡದು" ಎಂದು ಮೆಲ್ಲನೆಯ ಧ್ವನಿಯಲ್ಲಿ ಹೇಳಿದಳು.

ಆ ದುಃಖವನ್ನೂ ಸಹಿಸಿಕೊಂಡು ಮಾಧವ ಅವಳ ಕಿವಿಯಲ್ಲಿ ಮೆಲ್ಲನೆ "ಯಾರನ್ನಾದರೂ ನೋಡುವೆಯಾ?" ಎಂದ.

ಬಿಂದುವು ತಲೆಯಲ್ಲಾಡಿಸಿ "ಬೇಡ, ಇರಲಿ!" ಎಂದಳು.

ಬಿಂದುವಿನ ತಾಯಿಯು ಒಂದುಬಾರಿ ಔಷಧವನ್ನು ಕುಡಿಸಲು ಬಂದಳು. ಆದರೆ ಬಿಂದುವು ಗಟ್ಟಿಯಾಗಿ ಹಲ್ಲನ್ನು ಕಚ್ಚಿಕೊಂಡಳು

ಮಾಧವ ಎದ್ದು ನಿಂತು "ಇದೆಲ್ಲಾ ಆಗುವುದಿಲ್ಲ ಬಿಂದೂ! ನೀನು ನಮ್ಮೆಲ್ಲರ ಮಾತುಗಳನ್ನು ಕೇಳಲಿಲ್ಲ, ಆದರೆ ಯಾರ ಮಾತನ್ನು ನೀನು ಮೀರಲಾರೆಯೋ ಅವರನ್ನೇ ಹೋಗಿ ಕರೆತರುವೆನು. ಹಿಂತಿರುಗಿ ಬಂದು ಪುನಃ ನಿನ್ನನ್ನು ನೋಡುವ ಭಾಗ್ಯ ನನಗೊದಗಲಿ" ಎಂದು ಹೇಳಿ ಹೊರಗೆ ಬಂದು ಕಣ್ಣುಗಳನ್ನು ಒರೆಸಿಕೊಂಡ ಆ ರಾತ್ರಿ ಬಿಂದುವು ಶಾಂತಚಿತ್ತಳಾಗಿ ನಿದ್ರಿಸಿದಳು.

೦ ೦ ೦ ೦

ಸೂರ್ಯೋದಯದ ಸಮಯ. ಮಾಧವನು ಕೊಠಡಿಯೊಳಕ್ಕೆ ಬಂದು ದೀಪವನ್ನಾರಿಸಿ, ಕಿಟಕಿಯ ಬಾಗಿಲುಗಳನ್ನು ತೆರೆದನು. ಬಿಂದುವು ಕಣ್ದೆರೆದು ಪ್ರಭಾಕರನ ಪ್ರಥಮ ಪ್ರಕಾಶದಲ್ಲಿ ಪತಿಯ ಮುಖವನ್ನು ನೋಡಿ ನಸುನಕ್ಕು "ಯಾವಾಗ ಬಂದಿರಿ?" ಎಂದಳು.

"ಈಗತಾನೇ ಬಂದೆ. ಅಣ್ಣನವರು ಹುಚ್ಚರಂತೆ ಅಳುತ್ತಿರುವರು."

ಬಿಂದುವು ಮೆಲ್ಲನೆಯ ಧ್ವನಿಯಲ್ಲಿ "ಅದನ್ನು ನಾನು ಬಲ್ಲೆ! ಅವರ ಚರಣ-ಧೂಳಿಯನ್ನು ತಂದಿರುವಿರಾ?" ಎಂದಳು.

"ಅವರು ಹೊರಗಡೆ ಕುಳಿತು ಹುಕ್ಕಾ ಸೇದುತ್ತಿರುವರು, ಅತ್ತಿಗೆಯವರು ಕೈಕಾಲು ತೊಳೆದುಕೊಳ್ಳುತ್ತಿರುವರು. ಅಮೂಲ್ಯ ಗಾಡಿಯಲ್ಲೇ ಮಲಗಿದ್ದ,—ಮೇಲೆ ಮಲಗಿಸಲಾಗಿದೆ. ಕರೆತರಲೇ?" ಎಂದ ಮಾಧವ.

ಬಿಂದುವು ಸ್ವಲ್ಪಹೊತ್ತು ಸುಮ್ಮನಿದ್ದು "ಬೇಡ, ಇರಲಿ!" ಎಂದು ಮೆಲ್ಲನೆ ಮುಖವನ್ನು ಮತ್ತೊಂದು ಕಡೆಗೆ ತಿರುಗಿಸಿ ಮಲಗಿಕೊಂಡಳು.

ಅನ್ನಪೂರ್ಣೆಯು ಕೊಠಡಿಯನ್ನು ಪ್ರವೇಶಿಸಿ ತಲೆಯ ಬಳಿ ಬಂದು ಕುಳಿತು ತಲೆಯ ಮೇಲೆ ಕೈಯಾಡಿಸಿದೊಡನೆಯೇ ಬಿಂದುವು ಚಕಿತಳಾ